# ಅಚಲ

ಮೇ 8, 1989 ಬೆಲೆ: ರೂ. 1–50

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರದ ದ್ವೈಮಾಸಿಕ



ಸಂಪುಟ ೫ ಸಂಚಿಕೆ ೨

'ಅಚಲ' ಪತ್ರಿಕೆಯನ್ನು ಪಡೆಯಬಯಸುವವರು ದಯವಿಟ್ಟು ಕೆಳಗಿನ ವಿಳಾಸಕ್ಕೆ ಹತ್ತು ರೂಪಾಯಿಗಳನ್ನು ಎಂ.ಓ./ಡ್ರಾಫ್ಟ್ ಮೂಲಕ ಕಳುಹಿಸಿ.
ಕೂಪನ್‌ನಲ್ಲಿ ತಮ್ಮ ವಿಳಾಸವನ್ನು ಸ್ಪಷ್ಟವಾಗಿ ಬರೆಯಬೇಕು. ಚಂದಾದಾರರು ತಮ್ಮ ವಿಳಾಸ ಬದಲಾದರೆ ಕೂಡಲೇ ಕಾರ್ಡಿನಲ್ಲಿ ಬರೆದು ತಿಳಿಸಬೇಕು.

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ
221, 4ನೇ ಮೈನ್, ವೈಯಾಳಿಕಾವಲ್
ಬೆಂಗಳೂರು-560 003.

---



---

ಚಂದಾ ವಿವರ

| | | |
|---|---|---|
| ವಾರ್ಷಿಕ ಚಂದಾ : | ರೂ | 10-00 |
| ಬಿಡಿ ಪ್ರತಿ : | ರೂ | 1-50 |
| ವಿಶೇಷ ಪ್ರತಿ : | ರೂ | 2-00 |
| ಆಜೀವ ಚಂದಾ : | ರೂ | 100-00 |

---

Printed at PRINTSWELL, 78, 2nd Main Road Nagappa Block, Srirampuram, Bangalore-21 & Published by Dr. G. Ramakrishna on behalf of Jagruthi Mahila Adhyayana Kendra
221, IV Main, Vyalikaval, Bangalore-560 003.

Editor : N. GAYATRI

ಬದಲಾದ ಹೆಸರುಗಳೊಂದಿಗೆ ಈ ಪತ್ರಿಕೆ ನಾಲ್ಕನೇ ವರ್ಷವನ್ನು ಯಶಸ್ವಿಯಾಗಿ ಮುಗಿಸಿ ಐದನೇ ವರ್ಷಕ್ಕೆ ಕಾಲಿಡುತ್ತಿದೆ. ಈ ಪತ್ರಿಕೆಯನ್ನು ಹೀಗೆ ಬೆಳೆಸಿಕೊಂಡು ಹೋಗಲು, ಇನ್ನಷ್ಟು ಸತ್ವಯುತವಾಗಿಸಲು ನಿಮ್ಮೆಲ್ಲರ ಸಹಕಾರ ಅಗತ್ಯ.

---

ಪುಸ್ತಕ ವಿಮರ್ಶೆಗಾಗಿ ಪುಸ್ತಕ ಕಳುಹಿಸುವವರು ದಯವಿಟ್ಟು ಎರಡು ಪ್ರತಿಗಳನ್ನು ಕಳುಹಿಸಬೇಕಾಗಿ ವಿನಂತಿ.

---



---

## ಒಳಗೇನಿದೆ....

## ಪುನರ್ಚಿಂತನೆಯ ಹೆಸರಿನಲ್ಲಿ....

ಭಾರತೀಯ ಸಂಸ್ಕೃತಿ ತನ್ನದೇ ವೈಶಿಷ್ಟ್ಯಗಳಿಗೆ ಹೆಸರಾದ್ದು. ಈ ವೈಶಿಷ್ಟ್ಯಗಳ ಪಟ್ಟಿಯಲ್ಲಿ ವರದಕ್ಷಿಣೆಯ ಪದ್ಧತಿಯನ್ನೂ ಸೇರಿಸಬಹುದೆಂದು ನನ್ನ ಸಲಹೆ. ಪ್ರಪಂಚದ ಬೇರಾವ ಕಡೆಯಲ್ಲೂ ಕಂಡುಬರದಂತಹ ಈ ಅನನ್ಯವಾದ ಪದ್ಧತಿಯನ್ನು ಕುರಿತು ಇತ್ತೀಚೆಗೆ ನಡೆಯುತ್ತಿರುವ ಚರ್ಚೆಗಳು ಎತ್ತುವ ಮೂಲಭೂತ ಪ್ರಶ್ನೆಗಳನ್ನು ಕುರಿತಂತೆ ಈ ಟಿಪ್ಪಣಿ. 'ಮಾನುಷಿ' ಮಹಿಳಾ ಪತ್ರಿಕೆಯ ಸಂಪಾದಕಿಯವರು ಬಹಳ ದಿನಗಳ ಹಿಂದೆ ತಮ್ಮ ಪತ್ರಿಕೆಯಲ್ಲಿ 'ವರದಕ್ಷಿಣೆಯ ಬಹಿಷ್ಕಾರವನ್ನು ಕುರಿತಂತೆ ಪುನರ್ಚಿಂತನೆ'ಗಳು ಲೇಖನದಡಿಯಲ್ಲಿ ನಡೆಸಿರುವ ಚಿಂತನೆ ಹೆಣ್ಣನ್ನು ಒಂದು ಮಾನವೀಯ ಮೌಲ್ಯಗಳುಳ್ಳ ವ್ಯಕ್ತಿಯನ್ನಾಗಿ ನೋಡದೆ ಒಂದು ಸರಕನ್ನಾಗಿಯಷ್ಟೇ ಕಂಡಿದೆ. 'ವರದಕ್ಷಿಣೆ' ಸಮಸ್ಯೆಯನ್ನು ಬಿಡಿಯಾಗಿ, ಸಮಾಜದ ಸಂಕೀರ್ಣತೆಯೊಂದಿಗೆ ಬೇರ್ಪಡಿಸಿ ಬಾಲಿಶವಾಗಿ ನೋಡಿರುವ ಪ್ರಯತ್ನವಿದು. ಅಪ್ಪನ ಹೊರೆಯನ್ನು ಗಂಡನಿಗೆ ವರ್ಗಾಯಿಸುವಾಗ, ಗಂಡನು ಹೊರೆ ಹೊತ್ತದ್ದಕ್ಕೆ ತೆಗೆದುಕೊಳ್ಳುವ ಕೂಲಿ 'ವರದಕ್ಷಿಣೆ'. ಹೆಣ್ಣುಮಕ್ಕಳು ಜೀವನ ಪರ್ಯಂತ ತಂದೆಯ ಹಣದ ನೆರವಿನಿಂದಲೇ ಬದುಕಿದ ಸಾರ್ಥಕ್ಯ ಈ ವರದಕ್ಷಿಣೆಯ ವಿವಾಹದ ಮಹಿಳೆಯರಿಗಿರುತ್ತದೆ, ಎಂಬ ವಿಚಿತ್ರ ತರ್ಕ ಇದರ ಹಿನ್ನೆಲೆಯಾಗಿದೆ : ತನ್ನ ತಂದೆಯ ಮನೆಯ ಆಸ್ತಿಯ ಸೌಲಭ್ಯದಿಂದ ವಂಚಿತಳಾಗಿರುವ ಹೆಣ್ಣಿಗೆ ಅಪ್ಪ ನೀಡುವ ವರದಕ್ಷಿಣೆಯೇ ವರದಾನ. ಆದ್ದರಿಂದ ವರದಕ್ಷಿಣೆ ಪ್ರತಿಭಟನೆಗಳ ಮುಂದಾಳುಗಳು ಸ್ವಯಂಘೋಷಿತ ಸಮಾಜ ಸುಧಾರಕಿಯರೇ ಹೊರತು ವಿವಾಹಾಕಾಂಕ್ಷಿ ಮಹಿಳೆಯರಲ್ಲ.

ಒಟ್ಟಿನಲ್ಲಿ ಇಂತಹ ಪುನರ್ಚಿಂತನೆಗಳ ವಿಚಿತ್ರ ತರ್ಕ ನಮಗೇನೂ ಹೊಸದಲ್ಲ. ವರದಕ್ಷಿಣೆ ಸಮಸ್ಯೆಯ ಮೂಲ ಹಾಗೂ ಪರಿಹಾರ ಕುರಿತು ಒಂದು ಸರಳ ರೇಖೆಯಲ್ಲಿ ಬಿಡಿಸುವಂತಹುದಲ್ಲ. ಆದರೂ ಅದನ್ನು ಕುರಿತಾದ ಧೋರಣೆ ವ್ಯಕ್ತಪಡಿಸುವ ಮಾನವೀಯ ಮೌಲ್ಯಗಳು ಎಂತಹುದು, ಎಂಬುದು ಸೂರ್ಯಸ್ಪಷ್ಟ. ಕೆಲವು ದಿನಗಳ ಹಿಂದೆ ಕೇಂದ್ರದ ಮಂತ್ರಿಗಳೊಬ್ಬರು ಸ್ತ್ರೀ ಭ್ರೂಣಹತ್ಯೆಯನ್ನು ಇಂತಹುದೇ ವಿಚಿತ್ರ ಕಾರಣ ಕೊಟ್ಟು ಸಮರ್ಥಿಸಿಕೊಂಡದ್ದು ನಮ್ಮ ನೆನಪಿನಿಂದ ಮಾಸಿಲ್ಲ. ಸ್ತ್ರೀಯರಿಗೂ ಸಮಾನ ಆಸ್ತಿಯ ಹಕ್ಕು ಬೇಕೆಂಬುದರ ಬಗ್ಗೆ ಎರಡು ಮಾತಿಲ್ಲ. ಆದರೆ ಆಸ್ತಿಯ ಹಕ್ಕಿಗಾಗಿ ನಡೆಸುವ ಹೋರಾಟ ವರದಕ್ಷಿಣೆಯ ವಿರುದ್ಧದ ಹೋರಾಟಕ್ಕೆ ಪರ್ಯಾಯವಂತೂ ಅಲ್ಲ. ಜೊತೆ ಜೊತೆಯಲ್ಲಿ ಆಗಬೇಕೇಗದು. ಏನೇ ಆದರೂ ಅಲ್ಪ ಸಂಖ್ಯಾತ ಆಸ್ತಿವಂತ ಹೆಣ್ಣು–ಗಂಡುಗಳು ಪ್ರತಿನಿಧಿಸುವ ಮೌಲ್ಯವನ್ನೇ ಇಡೀ ಸಮಾಜದ ಮೌಲ್ಯವನ್ನಾಗಿಸಿ ಗುದ್ದಾಡುವುದರಲ್ಲಿ ಯಾವುದೇ ಅರ್ಥವಿಲ್ಲ. ಹೆಣ್ಣಿನ ಪರಿಪೂರ್ಣ ವ್ಯಕ್ತಿತ್ವದ ವಿಕಸನಕ್ಕೆ ಮಹತ್ವ ಕೊಡದ ಯಾವುದೇ ಹೊಸ ಚಿಂತನೆಗಳು ಅವಳಿಗೆ ಪ್ರಯೋಜನಕಾರಿಯಲ್ಲ. ಅಷ್ಟೇ ಅಲ್ಲ, ಪುನರ್ಚಿಂತನೆಯ ಮುಸುಕಿನಲ್ಲಿ ಮತ್ತೆ ಮತ್ತೆ ಮರುಕಳಿಸುವ ಅಪಾಯಕಾರಿ ಚಿಂತನೆಗಳ ಬಗ್ಗೆ ಎಲ್ಲರೂ ಎಚ್ಚರವಾಗಿರಬೇಕು.

ಎನ್. ಗಾಯತ್ರಿ

## ನಾನು,-ನೀನು, ನಾವು

ದಶ ದಿಶೆಯಲೂ ದಹಿಸಿ
ಬಾನೆತ್ತರಕೆ ಕಬಂಧ ಬಾಹುಗಳ ಚಾಚಿ
ಖಾಂಡವ ವನದ ನಂತರ ಮುಂದೇನೂ ಎನ್ನುವ
ಈ ಬಡಬಾಗ್ನಿಯ ತಾಪಕ್ಕೆ
ಹರಿವ ನದಿಯ ತಂಪು
ಝುಳು ಝುಳು ನಾದದಿಂಪು ಬೇಕು

ನೀವು ನೀರು ನೀರೆಯರೆಲ್ಲಾ ಹೀಗೆ....
ಗಿರಿಯ ಸೋಕಿ ಸರಿವ ಮಂದಾನಿಲದಂತೆ
ಹರಿಯುರೆಂದರೆ
ರಭಸದಿ ಭೋರ್ಗರೆವವರು !
ನಿಮ್ಮ ಕೊರೆತಕ್ಕೆ ಪಕ್ಕಾಗಿ ಅಣು ಅಣುವೂ ಸವೆದೆ
ತಗ್ಗು ದಿಣ್ಣೆಗಳ ಹಡೆದೆ

ನಿಮಗೆ ನನ್ನ
ಕೊರೆದು ಜರೆದು
ಮರುಳಾಗಿಸಿದ್ದಕ್ಕೆ ಹೆಮ್ಮೆ !
ನನಗೆ ನಿಮ್ಮ
ಪಾಲಕನಂತೆ ಹೊತ್ತು
ಮತ್ತು ವೇಗದಿ ಕುಗ್ಗಿಸಿ,
ಬೀಳಿಸಿ, ಧುಮ್ಮಿಕ್ಕಿಸಿದ್ದಕ್ಕೆ ಹೆಮ್ಮೆ !

ಹರಿದಿದ್ದೇವೆ ಮೈಲು
ಸಹಸ್ರ, ಸಹಸ್ರ—
ಮೇಲೆ ಮೇಲೆ ಸೋಕುತ್ತಾ ;
ಸೋಕುವ ಹರಿ ಸನಿಹದಲಿದ್ದರೂ
ನಾವು ಗಾವುದ ಗಾವುದ ದೂರ........

ನಮ್ಮಪ್ಪಂದಿರು ಹುಟ್ಟಿಸುತ್ತಾ
ಕಟ್ಟಿಬಿಟ್ಟ ಈ ಮುಸುಕು, ಮುಖವಾಡ
ರಂಗಿನ ಕನ್ನಡಕ ಧರಿಸಿ ಹರಿಯುತ್ತಾ
ಅದೇನಂಥ
ಕಂಡಿದ್ದೇವೋ ಪಡೆದಿದ್ದೇವೋ ?
ಒಬ್ಬರನೊಬ್ಬರು

ಹರಿದಿದ್ದೇವೆ,
ಇತಿಹಾಸದ ತಿರುಗಣೆ,
ಮಡುಗೆ ಬಿದ್ದ
ನಾನು ನೀನೂ ;
ಮತ್ತರಾಗದೆ, ಮುಕ್ತರಾಗದೆ.
ಸುಮ್ಮನೆ ನಮ್ಮ ಕಕ್ಷೆಯಲ್ಲೇ
ತಿರು ತಿರುಗುತ್ತಾ ;
ಬಿರಿ ಬಿರಿ ನೋಡುತ್ತಾ
ಮುಟ್ಟದೆ, ಸೋಕದೆ—

ಹರಿದಿದ್ದೇವೆ
ನೊರೆ, ಅಲೆಗಳ
ಅಬ್ಬರದಿ, ಸೇರಿದ್ದೇವೆಂಬ
ಭ್ರಮೆ ಹುಟ್ಟಿಸುತ್ತಾ
ಸರಿದಿದ್ದೇವೆ, ಸೋರಿದ್ದೇವೆ
ಜಂಟಿಯಾಗಿ ?....ಒಂಟಿಯಾಗಿ
ಕಾಲದ ಹೊನ್ನ ಸಾಗರದೆಡೆಗೆ....

—ರವಿ

# ವಿಶ್ಲೇಷಣೆಗೆ ಹೊಸ ಆಯಾಮ

ಸೀಮಂತಿನಿ ನಿರಂಜನ

ಕಳೆದ ಒಂದೆರಡು ದಶಕಗಳಲ್ಲಿ ಮಹಿಳಾ ಪ್ರಶ್ನೆಯ ಬಗ್ಗೆ ಬಹಳಷ್ಟು ಚರ್ಚೆ ನಡೆದಿದೆ. ಹೆಂಗಸಿನ ಮೇಲಿನ ದಬ್ಬಾಳಿಕೆಯ ವಿರುದ್ಧ ಪ್ರತಿಭಟಿಸುವ ದನಿಯಾಗಿ, ಮಹಿಳಾ ಗುಂಪುಗಳು ತಮ್ಮದೇ ಆದ ವಿಶಿಷ್ಟ ಸ್ಥಾನವನ್ನು ಚಳವಳಿಯಲ್ಲಿ ಪಡೆದುಕೊಂಡಿವೆ. ತಮ್ಮ ಕಾರ್ಯಕ್ರಮ ಹಾಗೂ ಬರವಣಿಗೆಯ ಮೂಲಕ ಜನರ ಗಮನವನ್ನು ಹೆಣ್ಣಿನ ಸ್ಥಿತಿಗತಿಯ ಕಡೆಗೆ ಸೆಳೆದಿದ್ದಾರೆ ಎಂದರೆ ತಪ್ಪಾಗಲಾರದು. ತಾತ್ವಿಕ ಹಾಗೂ ಕ್ರಿಯಾಶೀಲ ನೆಲೆಗಳೆರಡಲ್ಲೂ ಈ ಗುಂಪುಗಳು ವರದಕ್ಷಿಣೆ ಮತ್ತು ವರದಕ್ಷಿಣೆ ಸಾವುಗಳ ಅಮಾನುಷ ಛಾಯೆಯೊಡನೆ ಸೆಣಸಾಡುತ್ತಾ ಬಂದಿದ್ದಾರೆ.

ನನ್ನ ಈ ಪ್ರತಿಕ್ರಿಯೆಗೆ ಮೂಲ ಪ್ರಚೋದನೆ 'ಮಾನುಷಿ'ಯಲ್ಲಿ (No. 48, Sep–Oct 1988) ಪ್ರಕಟವಾದ ಲೇಖನ ('Rethinking Dowry Boycott'–Madhu Kishwar) ಮತ್ತು ಅದಕ್ಕೆ ಪ್ರತಿ ಸವಾಲುಗಳಂತೆ ಬಂದ 'Dowry Reconsidered'--Kalpana Sharma, *Express Magazine*, Jan 15 1989 ಹಾಗೂ 'On Kidneys and Dowry'–C. S. Lakshmi *Economic and Political Weekly*, Jan 28, 1989. ಕಿಷ್ವರ್ ಅವರ ಲೇಖನದ ಒಂದು ಸಾಲು ಹೀಗಿದೆ : "ವರದಕ್ಷಿಣೆಯ ನಿರ್ಮೂಲನೆಯ ಬಗ್ಗೆ ಮಾತನಾಡುವುದು ಇಂದು ಅಸಂಗತವೆನಿಸುತ್ತದೆ. ಬದಲಾಗಿ, ನಮ್ಮ ಗಮನವನ್ನೆಲ್ಲಾ ಹೆಂಗಸಿಗೆ ಆಸ್ತಿ ಹಕ್ಕು ಗಳಿಸುವತ್ತ ಹರಿಸಬೇಕು–ಬರಿಯ ಕಾಗದದ ಮೇಲೆ ಮಾತ್ರ ಅಲ್ಲ." ಈ ನಿಲುವು ಮಹಿಳಾ ಆಂದೋಲನಕ್ಕೆ ಹೊಸ ತಿರುವನ್ನು ಕೊಡಬಹುದೆಂದು ನನ್ನ ಭಾವನೆ. ಈ ವಾದವನ್ನು ತಕ್ಷಣವೇ ತಳ್ಳಿಹಾಕುವ ಬದಲು ಸ್ವಲ್ಪ ವಿಚಾರಿಸಿ ನೋಡಬಹುದು : ವರದಕ್ಷಿಣೆ ಸಾವು ಅಥವಾ ಒಟ್ಟಾರೆ ದಬ್ಬಾಳಿಕೆಯ ವಿರುದ್ಧದ ಪ್ರತಿಭಟನೆಗಳು ಎಷ್ಟೋ ಬಾರಿ ಸಾಂಕೇತಿಕವಾಗಬಹುದು ಅಥವಾ ನಿರ್ದಿಷ್ಟ ಫಲಿತಾಂಶಗಳನ್ನೂ ನೀಡಬಹುದು. ಇದರ ಜತೆಗೇ, ಅಸಮಾನತೆಯ ವಿವಿಧ ಆರ್ಥಿಕ–ಸಾಮಾಜಿಕ ಸ್ತರಗಳನ್ನೂ ಗುರುತಿಸುವುದು ಅಗತ್ಯ. ಅಸಮಾನ ಆಸ್ತಿ ಹಕ್ಕು ಇಲ್ಲಿ ಒಂದು ಉದಾಹರಣೆ ಮಾತ್ರ. ಪ್ರಮುಖ ಸ್ತ್ರೀವಾದಿಯೊಬ್ಬರ ಮೇಲಿನ ಹೇಳಿಕೆ ಹಾಗು ನಿಲುವು, ಅಸಮಾನತೆಯ ವಿಭಿನ್ನ ಮೂರ್ತರೂಪಗಳ ವಿರುದ್ಧ ಹೋರಾಡುವ ದಿಕ್ಕಿನಲ್ಲಿ ಒಂದು ಹೆಜ್ಜೆಯಾಗಬಹುದೇ ? ಅವರ ವಾದ ಎಷ್ಟರ ಮಟ್ಟಿಗೆ ಒಪ್ಪಿಗೆಗೆ ಅರ್ಹವಾದದ್ದು ? ಯಾವ ವಿಚಾರಗಳನ್ನು ಆ ವಾದ ಛಾಪೆಯ ಅಡಿಗೆ ಸೇರಿಸಿ, ಸುಮ್ಮನಾಗಿಬಿಡುತ್ತದೆ ? ಈ ನಿಲುವು ಇನ್ನೂ ವ್ಯಾಪಕವಾದ ಚರ್ಚೆಗೆ ಎಡೆ ಮಾಡಿಕೊಡಬೇಕು. ಇಂಥ ಚರ್ಚೆಯ ಚೌಕಟ್ಟಿನೊಳಗೆ ನಾವು ಮಹಿಳಾ ಗುಂಪುಗಳ ಚಟುವಟಿಕೆಗಳನ್ನು, ತಾತ್ವಿಕ ನಿಲುವುಗಳನ್ನು, ಅವುಗಳ ಪರಿಣಾಮವನ್ನು ಮೆಲುಕು ಹಾಕಿ, ಮುಂದಿನ ಕಾರ್ಯತಂತ್ರಗಳನ್ನು ಸಿದ್ಧಗೊಳಿಸಲು ಸಾಧ್ಯವಾಗುವುದೆಂದು ನನ್ನ ನಂಬಿಕೆ.

ವರದಕ್ಷಿಣೆಯನ್ನು 'ಭೀಕರ ಸಾಮಾಜಿಕ ಸಮಸ್ಯೆ' ಎಂದು ಗುರುತಿಸಿ, ಇದಕ್ಕೆ ಪರಿಹಾರ ಸೂಚಿಸುವುದರಲ್ಲಿ ವ್ಯಕ್ತಿಗಳೂ ಸಂಸ್ಥೆಗಳೂ ಸರಕಾರವೂ ತೊಡಗಿವೆ. ಇವರ ಮುಖ್ಯ ಉದ್ದೇಶವೆಂದರೆ ವರದಕ್ಷಿಣೆಯ ಅನಿಷ್ಟಗಳ ಬಗ್ಗೆ ಜನರಲ್ಲಿ 'ತಿಳುವಳಿಕೆ' ಮೂಡಿಸುವುದು. ಮಹಿಳಾ ಗುಂಪುಗಳೂ ತಮ್ಮದೇ ಆದ ರೀತಿಯಲ್ಲಿ ಈ ಸಮಸ್ಯೆಯನ್ನು ಎದುರಿಸುತ್ತವೆ. ಕಾನೂನು ಹೊರಡಿಸುವುದರಿಂದ ಆಗುವ (ಅ)ಪ್ರಯೋಜನ ಎಷ್ಟು ಎಂದೂ ಸ್ಪಷ್ಟವಾಗಿದೆ. ಸಂದರ್ಭ ಹೀಗಿರುವಾಗ ವರದಕ್ಷಿಣೆ ಬಗೆಗೆ ನಮ್ಮ ನಿಲುವು ಯಾವುದಾಗಬೇಕು ? ಮೌಲಿಕ ದೃಷ್ಟಿಕೋನದಿಂದ ಅದು ತಪ್ಪು ಎಂದು ಹೇಳಿದರೆ ಸಾಕೇ ? ತಾತ್ವಿಕ ಚಿಂತನೆಯ ಮೂಲಕ 'ಅದು ಹೇಯ' ಎಂದು ಖಂಡಿಸಿದರಾಯಿತೇ ? ಅಥವಾ ವರದಕ್ಷಿಣೆ ಕೊಡುವ–ತೆಗೆದುಕೊಳ್ಳುವ ಜನರನ್ನು ಅಂಥ ಮದುವೆಗಳನ್ನು ಬಹಿಷ್ಕರಿಸಿ, ಧಿಕ್ಕರಿಸಬೇಕೆ ? ಈ ಎಳೆಗಳನ್ನು ಒಟ್ಟಾಗಿ ಹೆಣೆಯುವುದು ಸಾಧ್ಯವೇ ? ಹೇಗೆ ?

ಸಮಸ್ಯೆಯನ್ನು ನಿರ್ಮೂಲನೆ ಮಾಡಬೇಕಾದರೆ, ಅದರ ಇತಿಹಾಸವನ್ನು, ಅಂದರೆ, ವರದಕ್ಷಿಣೆಯ ಹುಟ್ಟು, ಬೆಳವಣಿಗೆ, ಅದು ಪಡೆದುಕೊಂಡಿರುವ ಹೊಸ ಆಯಾಮಗಳನ್ನು ಮೊದಲು ಗುರುತಿಸಬೇಕು ಎನ್ನುವವರು ಹಲವರು. ಜಾತಿ, ವರ್ಗ, ಪ್ರದೇಶಗಳಿಗೆ ಅನುಗುಣವಾಗಿ ಈ ಆಚರಣೆಯಲ್ಲಿ ಯಾವ ಭಿನ್ನತೆಗಳನ್ನು ಕಾಣುತ್ತೇವೆ ? ಇಂದು ಚಾಲ್ತಿಯಲ್ಲಿರುವ ವರದಕ್ಷಿಣೆಯ ರೂಪಕ್ಕೂ, ಹಿಂದೆ ರೂಢಿಯಲ್ಲಿದ್ದ ಕನ್ಯಾದಾನದೊಂದಿಗಿನ ದಕ್ಷಿಣೆಗೂ ಎಷ್ಟು ಅಂತರ? ಇವತ್ತಿನ ಆಚರಣೆಗಳನ್ನು ಸಮರ್ಥಿಸಿಕೊಳ್ಳಲು, ಸಂಪ್ರದಾಯದ ಹೆರಳನ್ನು ಕಾಲಕ್ಕೆ ತಕ್ಕಂತೆ ಹಿಗ್ಗಿಸಿ, ಬಗ್ಗಿಸುವ ಪ್ರಯತ್ನ ಉದಾಹರಣೆಯೇ ಇದು ? ಹಿಂದಿನ ಕಾಲದ 'ವಧು ದಕ್ಷಿಣೆ'ಯ ಲೋಕರೂಢಿ ಕ್ರಮೇಣ ವರದಕ್ಷಿಣೆಯಾಗಿ ಮಾರ್ಪಟ್ಟುದರ ಕಾರಣಗಳೇನು ? ಸ್ತ್ರೀಧನಕ್ಕೂ ವರದಕ್ಷಿಣೆಗೂ ಇರುವ ವ್ಯತ್ಯಾಸಗಳಾವುವು ? ಅದಕ್ಕನುಗುಣವಾಗಿ ನಮ್ಮ ಸಮಾಜದ ರಚನೆಯಲ್ಲಿ ಏನು ಬದಲಾವಣೆಗಳಾಗಿವೆ ? ....ಇವೆಲ್ಲದರ ಬಗ್ಗೆ ಅನೇಕರು ಚಿಂತನೆ ನಡೆಸಿದ್ದಾರೆ, ನಡೆಸುತ್ತಲಿದ್ದಾರೆ.

ವರದಕ್ಷಿಣೆಯ ಸಾಮಾಜಿಕ–ಸಾಂಸ್ಕೃತಿಕ, ಆರ್ಥಿಕ, ಧಾರ್ಮಿಕ (ಹಾಗು ಜಾತೀಯ) ನೆಲೆಗಳನ್ನು ಪ್ರಸ್ತಾಪಿಸಿ, ಈ ಸಂಸ್ಥೆಯು ಇಂದಿನ ಒಟ್ಟಾರೆ ಸಾಮಾಜಿಕ ಸನ್ನಿವೇಶದ ಒಂದು ನಿದರ್ಶನವಷ್ಟೆ ಎನ್ನುವವರೂ ಇದ್ದಾರೆ. ಬ್ರಿಟಿಷ್ ಆಳ್ವಿಕೆ, ಶಿಕ್ಷಣ ಮತ್ತು ಪಾಶ್ಚಾತ್ಯ ಸಂಪರ್ಕದಿಂದಾಗಿ ಭಾರತೀಯ ಸಮಾಜ ಹಾಗು ಆರ್ಥಿಕ ವಲಯಗಳಲ್ಲಿ ಉಂಟಾದ ಬದಲಾವಣೆಗಳ ಸಂಕೇತ; ವಿಶ್ವದಾದ್ಯಂತ ಹರಡಿರುವ ವ್ಯಾಪಾರೀ ಮನೋಭಾವದ ಕುರುಹು ಎಂಬ ಅಭಿಪ್ರಾಯವೂ ಇದೆ. ಸಾಮಾಜಿಕ ರಚನೆಯಲ್ಲಿ ಮೂಲಭೂತವಾದ ಬದಲಾವಣೆ ಆಗದ ಹೊರತು ಸಮಸ್ಯೆಗೆ ಪರಿಹಾರವಿಲ್ಲ ಎಂದು ಎಲ್ಲರೂ ಒಪ್ಪಿದರೂ ಈ 'ಮೂಲಭೂತ' ಪ್ರಶ್ನೆಗಳ ಬಗ್ಗೆ ನಮ್ಮಲ್ಲಿ ಇನ್ನಷ್ಟು ಚರ್ಚೆಯಾಗಬೇಕು.

ಆಸ್ತಿ ಹಕ್ಕನ್ನು ಮೂಲಭೂತ ವಿಷಯಗಳಲ್ಲಿ ಒಂದಾಗಿ ಪರಿಗಣಿಸುವುದಾದರೆ, ಮಧು ಕಿಷ್ವರ್ ಅವರ ಲೇಖನದಲ್ಲಿ ಸ್ವಲ್ಪ ಹೆಚ್ಚು ಕೂಲಂಕಶವಾಗಿ ಓದಬೇಕಾಗುತ್ತದೆ. ತಂದೆಯ ಆಸ್ತಿಯಲ್ಲಿನ ತಮ್ಮ ಪಾಲನ್ನು ವರದಕ್ಷಿಣೆಯ ರೂಪದಲ್ಲಿ ಪಡೆಯಬೇಕಾದ ಹೆಂಗಸಿನ ಪರಿಸ್ಥಿತಿಯನ್ನು ಅವರು ಪ್ರಸ್ತಾಪಿಸುತ್ತಾರೆ. ಸಮನಾದ ಆಸ್ತಿ ಹಕ್ಕು ಇಲ್ಲದ ಹೆಣ್ಣುಮಗಳಿಗೆ ವರದಕ್ಷಿಣೆಯೇ ಒಂದು ರೀತಿಯಲ್ಲಿ ಆಧಾರ ನೀಡುತ್ತದೆ ; 'ವರದಕ್ಷಿಣೆಯನ್ನು ತ್ಯಜಿಸು' ಎಂದು ಅವಳಿಗೆ ಹೇಳುವ ಬದಲು, ಅವಳ ಆಸ್ತಿ ಹಕ್ಕಿಗಾಗಿ ಹೋರಾಡುವುದು ಹೆಚ್ಚು ಅರ್ಥಪೂರ್ಣ ಎನ್ನುತ್ತಾರೆ. ಆದರೆ, ಈ ವಾದದೊಳಗಿನ ಗೊಂದಲಗಳನ್ನು ಬೆಳಕಿಗೆ ತರುವುದು ಅಗತ್ಯ. ಮುಖ್ಯವಾಗಿ, 'ವರದಕ್ಷಿಣೆ'ಯ ರೂಪವೇನು ? ಅದರ ಮೇಲೆ ಹೆಣ್ಣಿಗೆ ಯಾವ ಅಧಿಕಾರ ಇರುತ್ತದೆ ? ಅದು ತನ್ನ ಆಸ್ತಿ ಎಂದು ಆಕೆ ಭಾವಿಸುವುದು ಸಾಧ್ಯವೇ ? ಈ ತೊಂದರೆಗಳನ್ನು ಗುರುತಿಸಿಯೂ ಕಿಷ್ವರ್ ಅವುಗಳ ಬಗ್ಗೆ ಯಾವುದೇ ತೀರ್ಮಾನಕ್ಕೆ ಬರದೇ ಹೋಗುತ್ತಾರೆ. 'ಹೆಣ್ಣುಮಗಳಿಗೆ ಆಸ್ತಿ ಹಕ್ಕು' ನಮ್ಮ ಹೊಸ ಘೋಷಣೆ ಆಗಬೇಕು, ಅದಕ್ಕಾಗಿ ಕಾನೂನಿನಲ್ಲೇ ತಕ್ಕ ಮಾರ್ಪಾಡುಗಳಾಗಬೇಕು (ಉದಾಹರಣೆಗೆ, ಮಗಳನ್ನು ಕಡೆಗಾಣಿಸುವ ಉಯಿಲುಗಳನ್ನು ಅನೂರ್ಜಿತ ಎಂದು ಪರಿಗಣಿಸಬೇಕು, ಇತ್ಯಾದಿ) ಎನ್ನುತ್ತಾರೆ.

ಇದರ ಹಿನ್ನೆಲೆಯಲ್ಲಿ ಎರಡು ಅಂಶಗಳನ್ನು ಪ್ರಸ್ತಾಪಿಸಲು ಬಯಸುತ್ತೇನೆ. ಮೊದಲು ವರದಕ್ಷಿಣೆಯನ್ನು ಐಹಿಕವಾಗಿ ಅರ್ಥೈಸಿ, ಅದರ ಆರ್ಥಿಕ, ಪ್ರಾದೇಶಿಕ, ಧಾರ್ಮಿಕ ಆಯಾಮಗಳನ್ನು ಗುರುತಿಸುವುದು ಅಗತ್ಯ. ಹೀಗೆ ಮಾಡದೆಯೇ, ವರದಕ್ಷಿಣೆ ಬದಲು ಆಸ್ತಿ ಹಕ್ಕಿನತ್ತ (ಇದೂ ಮುಖ್ಯವೆಂದು ಒಪ್ಪುತ್ತೇನೆ) ಗಮನ ತಿರುಗಿಸಿದರೆ ನಮ್ಮ ವಿಶ್ಲೇಷಣೆ ಹಾಗು ಕ್ರಿಯೆ ಭದ್ರವಾದ ಬುನಾದಿಯ ಮೇಲೆ ನಿಂತಿರಲಾರದು. ಎರಡನೆಯದಾಗಿ, ಸಂಸಾರದಲ್ಲಿ ಹೆಣ್ಣಿಗಿರುವ ಸ್ಥಾನ ಎಂತಹುದು ಎಂಬುದನ್ನು ಇನ್ನೂ ತೀಕ್ಷ್ಣವಾಗಿ ಅವಲೋಕಿಸಬೇಕು. ಅದು ಅವಳು ತರುವ ವರದಕ್ಷಿಣೆಯ ಮೊತ್ತಕ್ಕೆ, ಅಥವಾ ಅವಳ ಆಸ್ತಿ-ಅಂತಸ್ತಿಗೆ ಸಂಬಂಧಿಸಿದ್ದು ಎಂದು ಭಾವಿಸುವುದು ಸಾಮಾನ್ಯ. ಆದರೆ, ಅವಳ ಉತ್ಪಾದನೆ ಹಾಗು ಮರು–ಉತ್ಪಾದನಾ ಶಕ್ತಿಗಳಿಗೂ ಸಂಸಾರದಲ್ಲಿನ ಅವಳ ಸ್ಥಾನಕ್ಕೂ ಸಂಬಂಧ ಹೂಡುವುದು ಸಾಧ್ಯವೇ ? ಆಗ, ವರದಕ್ಷಿಣೆ ಮತ್ತು ಆಸ್ತಿ ಹಕ್ಕು ಮೂಲಭೂತವೋ ಅಥವಾ ಉತ್ಪಾದನೆ ಮತ್ತು ಮರು–ಉತ್ಪಾದನೆ ಮೂಲಭೂತವೋ ಎಂಬುದನ್ನು ನಿಶ್ಚಯಿಸಬೇಕಾಗುತ್ತದೆ.

# ಅಕ್ಕ : ಒಂದು ಪರಿಚಯ

□ ವಿಜಯಾ ದಬ್ಬೆ

ಭಾಷೆಯಲ್ಲಿ ದಾಖಲಾದ ಕರ್ನಾಟಕದ ಇತಿಹಾಸವನ್ನು ಕ್ರಿ.ಪೂ.ಮೂರನೆಯ ಶತಮಾನದ ಶಾಸನಗಳು ಪ್ರಾಕೃತದಲ್ಲೂ ಕ್ರಿ.ಶ. 450ರ ಶಾಸನವು ಪ್ರಾದೇಶಿಕ ಭಾಷೆಯಾದ ಕನ್ನಡದಲ್ಲೂ ಪ್ರಾರಂಭಿಸಿದವು. ಆದರೆ ಮಹಿಳೆಯರ ಬೌದ್ಧಿಕ, ಆಧ್ಯಾತ್ಮಿಕ, ಭಾವುಕ; ಐಹಿಕ ಚರಿತ್ರೆಯ ಬಗ್ಗೆ ಈ ಇತಿಹಾಸ ಹೇಳಿದ್ದು ತೀರ ಕಡಿಮೆ. ಅಲ್ಲಲ್ಲಿ ಕೆಲವು ರಾಣಿಯರು, ಧಾರ್ಮಿಕ ಸಾಧಕಿಯರು, ಸಾಧ್ವಿಯರು ಉಲ್ಲೇಖಗೊಂಡಿದ್ದಾರೆ ; ಸಾಹಿತ್ಯ ಕೃತಿಗಳಲ್ಲಿ ಪುರುಷ ಲೇಖನಿಯಲ್ಲಿ ತಲೆದೋರುವ ಸ್ತ್ರೀ ಜೀವನ, ಸ್ತ್ರೀ ಮೌಲ್ಯಗಳು ಇವೆಯಾದರೂ ಸ್ತ್ರೀಯರು ತಮ್ಮ ವೈಯಕ್ತಿಕ ಸಾಧನೆಗಳಿಂದ ಔನ್ನತ್ಯಕ್ಕೇರಿದ್ದು ಹಾಗೂ ಅಂಥ ವ್ಯಕ್ತಿತ್ವಗಳು ಭಾಷೆಯ ಮೂಲಕ ತಮ್ಮನ್ನು ಗಮನಾರ್ಹ ಪ್ರಮಾಣದಲ್ಲಿ ಅಭಿವ್ಯಕ್ತಿಸಿಗೊಂಡಿದ್ದು ಹನ್ನೆರಡನೆಯ ಶತಮಾನದಲ್ಲಿ.

12ನೆಯ ಶತಮಾನದಲ್ಲಿ ನಡೆದ ವೀರಶೈವ ಚಳವಳಿ ಕರ್ನಾಟಕದ ಚರಿತ್ರೆಯಲ್ಲಿ ಬಹುದೊಡ್ಡ ತಿರುವು. ಮುಖ್ಯವಾಗಿ ಧಾರ್ಮಿಕವಾದ ಈ ಚಳುವಳಿ ಅಂದಿನ ಸಾಮಾಜಿಕ, ರಾಜಕೀಯ, ಆರ್ಥಿಕ ವಲಯಗಳ ಕೆಲವು ಬದಲಾವಣೆಗಳನ್ನೂ ತನ್ನ ಧ್ಯೆಯೋದ್ದೇಶಗಳಲ್ಲೂ, ಕಾರ್ಯವಿಧಾನಗಳಲ್ಲೂ ಸೇರಿಸಿಕೊಂಡಿತ್ತು. ಸು.1166ರ ಸುತ್ತಮುತ್ತಲ ವರ್ಷಗಳಲ್ಲಿ ಬೆಳೆಯುತ್ತಿದ್ದ ಈ ಚಳುವಳಿ ಅಂದಿನ ಸಾಂಪ್ರದಾಯಿಕವಾದ, ಜಾತಿನಿಷ್ಠವಾದ ಸಮಾಜ ವ್ಯವಸ್ಥೆಯ ವಿರುದ್ಧ ಸಿಡಿಯಿತು. ಬಹುದೈವಗಳ ಉಪಾಸನೆಯನ್ನೂ, ಪ್ರಬಲ ಸಂಸ್ಥೆಯಾಗಿ, ಭ್ರಷ್ಟಾಚಾರಗಳ ಆಗರವಾಗಿದ್ದ ದೇವಾಲಯವನ್ನೂ ಪುರೋಹಿತಶಾಹಿಯನ್ನೂ ಮೂರ್ತಿಪೂಜೆಯನ್ನೂ ಖಂಡಿಸಿತು. ಶಿವನನ್ನು ಪರಮದೈವವನ್ನಾಗಿ ಒಪ್ಪಿಕೊಂಡ ಈ ಭಕ್ತಿಮಾರ್ಗ ತನ್ನ ಬಾಗಿಲನ್ನು ಎಲ್ಲ ಜಾತಿ–ವರ್ಗಗಳಿಗೆ ಮುಕ್ತವಾಗಿ ತೆರೆದಿತ್ತು. ಒಮ್ಮೆ ಈ ಗುಂಪಿನಲ್ಲಿ ಸೇರಿದ ಭಕ್ತರೆಲ್ಲರೂ ಸಮಾನರೆಂದು ತಿಳಿಯಲಾಗುತ್ತಿತ್ತು.

ಸ್ತ್ರೀಯರ ದೃಷ್ಟಿಯಿಂದಲೂ ಈ ಚಳವಳಿ ಮಹತ್ವದ್ದಾಗಿದೆ. ಜಾತಿ–ವರ್ಗಗಳ ಶ್ರೇಣಿಯನ್ನು ಈ ಚಳುವಳಿ ಧಿಕ್ಕರಿಸಿದಂತೆ ಆತ್ಮ ಅಥವಾ ಚೈತನ್ಯಕ್ಕೆ ಗಂಡು ಹೆಣ್ಣಿನ ಭೇದವಿಲ್ಲ ಎಂಬುದನ್ನು ಒಪ್ಪಿತು. ಆದರೆ ಸಮಾನತೆಯ ಈ ಹಂಬಲ ಅಂದಿನ ಇಲ್ಲಿನ ಲೌಕಿಕ ಬದುಕಿಗೆ ಹೆಚ್ಚಾಗಿ ಹರಡಲಿಲ್ಲ. ಸಾಮಾಜಿಕ, ಆರ್ಥಿಕ ಮುಖಗಳಲ್ಲಿ ಲಿಂಗಾಧಾರಿತ ಶ್ರೇಣಿಯುಳ್ಳ ವ್ಯವಸ್ಥೆಯನ್ನು ಈ ಚಳವಳಿಯೂ ಮುಂದುವರಿಸಿತು. ಇಲ್ಲಿನ ಸ್ತ್ರೀಯರ ಬದುಕಿನಲ್ಲಿ ಮೂಲಭೂತವಾದ ಬದಲಾವಣೆಗಳನ್ನು ತರುವುದು ಚಳವಳಿಯ ಪ್ರಧಾನ ಉದ್ದೇಶವಾಗಿರಲಿಲ್ಲ. ಆದರೆ ಹೆಂಗಸು ಕೂಡ ಆಧ್ಯಾತ್ಮಿಕ ಸಾಧನೆಯ ಹಾದಿಯಲ್ಲಿ ನಡೆಯಲು ಅವಕಾಶವಿತ್ತು, ಅಷ್ಟೇ ಅಲ್ಲ ಹಾಗೆ ನಡೆಯಲು ಉತ್ತೇಜನವಿತ್ತು. ನಡುವೆ ಸುಳಿವಾತ್ಮನೂ ಗಂಡೂ ಅಲ್ಲ ಹೆಣ್ಣೂ ಅಲ್ಲ ಎಂಬ ಬೇಡರ ದಾಸಿಮಯ್ಯನ ಮಾತು ಸ್ತ್ರೀಯರನ್ನು ಕುರಿತ ಈ ಚಳವಳಿಯ ಧೋರಣೆಯನ್ನು ಕ್ರೋಢೀಕರಿಸುತ್ತದೆ. ಸ್ತ್ರೀಯರನ್ನು ಕುರಿತಾದ ಈ ನಿಲುವು ಕೇವಲ ತಾತ್ತ್ವಿಕವಾದುದಲ್ಲ, ಆಚರಣೆಯಲ್ಲಿಯೂ ಇತ್ತು. ಅಂತೆಯೇ ಸೂಳೆಕಾಯಕದ ಸಂಕವ್ವ, ಸೂಜಿಕಾಯಕದ ತಿಮ್ಮವ್ವೆ, ಕೊಪ್ಪಣದ ಸೋಮವ್ವೆ, ಕನ್ನಡಿಕಾಯಕದ ರೇವಮ್ಮ, ಧೂಪದ ಗೊಗ್ಗವ್ವೆ ಮೊದಲಾದ ಅನೇಕ ಸಾಮಾನ್ಯ ಸ್ತ್ರೀಯರು ಈ ಚಳವಳಿಯಲ್ಲಿ ಭಾಗವಹಿಸಿದ್ದಾರೆ, ವಚನಗಳನ್ನು ರಚಿಸಿದ್ದಾರೆ. ಮೇಲಿನ ಹೆಸರುಗಳೇ ಸೂಚಿಸುವಂತೆ ಇಲ್ಲಿ ವಿವಿಧ ವೃತ್ತಿಗಳಿಂದ, ವಿವಿಧ ಜಾತಿ–ವರ್ಗಗಳಿಂದ ಬಂದ ಮಹಿಳೆಯರಿದ್ದಾರೆ, ರಾಜಮನೆತನದಿಂದ ಬಂದವರೂ ಇದ್ದಾರೆ; ವೈವಾಹಿಕ ಸಂಬಂಧಗಳ ದೃಷ್ಟಿಯಿಂದಲೂ ವಿವಿಧ ಹಿನ್ನೆಲೆಗಳಿಂದ ಬಂದ ಮಹಿಳೆಯರು ಮುಕ್ತವಾಗಿ ಭಾಗವಹಿಸಿದ್ದಾರೆ. ಅಕ್ಕನಾಗಮ್ಮನಂಥ ವಿಧವೆಯರು, ಎರಡನೆಯ ಪತ್ನಿ

ಯಾದ ನೀಲಲೋಚನೆ, ವೈವಾಹಿಕ ಚೌಕಟ್ಟನ್ನು ಧಿಕ್ಕರಿಸಿದ ಅಕ್ಕ, ವೈವಾಹಿಕ ಚೌಕಟ್ಟಿನೊಳಗೆ ಬಾರದ ಸೂಳೆ ಸಂಕವ್ವ, ಅನೇಕ ವಿವಾಹಿತ ಮಹಿಳೆಯರು–ಹೀಗೆ ಅಂದಿನ ಸಮಾಜದ ಅನೇಕ ಸ್ತರ, ಹಿನ್ನೆಲೆಗಳನ್ನು ಈ ಮಹಿಳೆಯರು ಪ್ರತಿನಿಧಿಸುತ್ತಾರೆ.

ಗಂಡನನ್ನು ತಿದ್ದಿದ ಆಯ್ದಕ್ಕಿ ಮಾರಯ್ಯನ ಪತ್ನಿ, ಈ ಚಳವಳಿಯ ಬೌದ್ಧಿಕ ಎತ್ತರದಲ್ಲಿದ್ದ ಅಲ್ಲಮನನ್ನು ಪ್ರಶ್ನಿಸಿದ ಮುಕ್ತಾಯಕ್ಕ, ತನ್ನ ಅನುಭಾವಿಕ ಎತ್ತರ ವ್ಯಕ್ತಿತ್ವದಿಂದ ಎಲ್ಲರ ಗೌರವ ಪಡೆದ ಅಕ್ಕ, ನೀಲಾಂಬಿಕೆ ಮೊದಲಾದವರು ಇಲ್ಲಿದ್ದಾರೆ, ಚಳವಳಿ ತೆರೆದ ಮುಕ್ತ ಅವಕಾಶದಿಂದಾಗಿ ಮೊದಲ ಬಾರಿಗೆ ಬೌದ್ಧಿಕ, ಆಧ್ಯಾತ್ಮಿಕ ಸಾಹಿತ್ಯಕ ವಲಯಗಳಿಗೆ ಸಾರ್ವಜನಿಕವಾಗಿ ಮಹಿಳೆಯರು ಬರುವಂತಾಯಿತು. ಈ ವೇಳೆಗಾಗಲೇ ಕನ್ನಡಕ್ಕೆ 7–8 ಶತಮಾನಗಳ ಭಾಷಿಕ–ಐತಿಹಾಸಿಕ ಹಿನ್ನೆಲೆಯಿದ್ದರೂ ನಮಗೆ ಉಪಲಬ್ಧವಿರುವ ಮೊದಲ ಕನ್ನಡ ಕವಯಿತ್ರಿಯರು ಈ ವಚನಕಾರ್ತಿಯರೇ ಆಗಿದ್ದಾರೆ. ಸು. 300 ಜನ ವಚನಕಾರರ ಪೈಕಿ 30ಜನ ಮಹಿಳೆಯರಿದ್ದಾರೆ. ನೀಲಲೋಚನೆ, ಗಂಗಾಂಬಿಕೆ, ಅಕ್ಕಮ್ಮ, ಅಕ್ಕನಾಗಮ್ಮ, ಸತ್ಯಕ್ಕ ಮೊದಲಾದ ವಚನಕಾರ್ತಿಯರನ್ನು ಇಲ್ಲಿ ನೆನೆಯಬಹುದು. ಈ ವಚನಕಾರ್ತಿಯರ, ಶರಣೆಯರ ಗುಂಪಿನಲ್ಲಿ ಎದ್ದು ಕಾಣುವ ಶ್ರೇಷ್ಠ ಅನುಭವಿ ಮತ್ತು ಕವಯಿತ್ರಿ ಅಕ್ಕಮಹಾದೇವಿ.

ಅಕ್ಕನೆಂದೇ ಪ್ರಸಿದ್ಧಳಾದ ಅಕ್ಕಮಹಾದೇವಿಯ ವ್ಯಕ್ತಿತ್ವದ, ಉನ್ನತಿ, ವಚನಗಳ ಶ್ರೇಷ್ಠತೆ, ಅನುಭಾವಿಕ ಎತ್ತರವನ್ನು ಅವಳ ಸಮಕಾಲೀನರು ಮುಕ್ತವಾಗಿ ಮೆಚ್ಚಿದ್ದಾರೆ. ಚನ್ನಬಸವಣ್ಣ ಎಂಬ ವಚನಕಾರ ಅಕ್ಕನನ್ನು ಕುರಿತು ಹೀಗೆ ಹೇಳಿದ್ದಾನೆ :

ಅಜಕಲ್ಪಕೋಟಿ ವರ್ಷದವರೆಲ್ಲರೂ ಹಿರಿಯರೆ ?
ಹುತ್ತೇರಿ ಚಿತ್ತ ಬೆಳೆದ ತಪಸ್ವಿಗಳೆಲ್ಲರೂ ಹಿರಿಯರೆ ?
ನರೆತರೆ ಹೆಚ್ಚಿ ಮತಿಗೆಟ್ಟು ಒಂದನಾಡಹೋಗಿ
ಒಂಬತ್ತನಾಡುವ ಅಜ್ಞಾನಿಗಳೆಲ್ಲ ಹಿರಿಯರೇ ?
ಅನುವನರಿದು ಘನವ ಬೆರೆಸಿ ಹಿರಿದು ಕಿರಿದೆಂಬ
ಭೇದವ ಮರೆದು, ಕೂಡಲ ಚೆನ್ನಸಂಗಯ್ಯನಲ್ಲಿ
ಬೆರೆಸಿ ಬೇರಿಲ್ಲದಿಪ್ಪ ಹಿರಿಯತನ
ನಮ್ಮ ಮಹಾದೇವಿಯಕ್ಕಂಗಾಯಿತು ಕೇಳಾಪ್ರಭುವೇ!

ಬಸವಣ್ಣ, ಅಲ್ಲಮಪ್ರಭು, ಸಿದ್ಧರಾಮ ಮೊದಲಾದ ಅನೇಕರು ಅಕ್ಕನನ್ನು ಆದರ, ಗೌರವಗಳಿಂದ ಮನತುಂಬಿ ಸ್ಮರಿಸಿದ್ದಾರೆ. ತನ್ನ ಸಮಕಾಲೀನರಿಂದಲೇ ಹೀಗೆ ಗುರುತಿಸಲ್ಪಟ್ಟ, ಗೌರವಿಸಲ್ಪಟ್ಟ ಅಕ್ಕನನ್ನು ಕುರಿತ ಸಾಹಿತ್ಯ ಆ ನಂತರದ ಶತಮಾನಗಳಲ್ಲಿ ವಿಪುಲವಾಗಿ ಬಂದಿದೆ.

ಕಾಲಸರಿದಂತೆ ಅವಳ ಚರಿತ್ರೆಯ ಚಾರಿತ್ರಿಕ ಅಂಶಗಳಿಗಿಂತ ಪೌರಾಣಿಕ ಅಂಶಗಳ ಬಗೆಗೇ ಹೆಚ್ಚು ಗಮನ ಹರಿಯಿತಾದರೂ ಈ ಪ್ರಮಾಣದಲ್ಲಿ ಚರಿತ್ರಕಾರರ, ಪುರಾಣ ಕವಿಗಳ, ಕವಿಗಳ ಗಮನ ಸೆಳೆದ ಮತ್ತೊಂದು ಚಾರಿತ್ರಿಕ ಮಹಿಳಾ ವ್ಯಕ್ತಿತ್ವ ಕನ್ನಡದಲ್ಲಿಲ್ಲ. ಕಾಲದ ದೃಷ್ಟಿಯಿಂದ ಅಕ್ಕನಿಗೆ ಹತ್ತಿರವಾದ ಹರಿಹರ(1200) 'ಮಹಾದೇವಿಯಕ್ಕನ ರಗಳೆ'ಯಿಂದ ಹಿಡಿದು ಇವತ್ತಿಗೂ ಆಕೆಯನ್ನು ಕುರಿತ ಬರವಣಿಗೆಗಳು ಬರುತ್ತಲೇ ಇವೆ. 'ಮಹಾದೇವಿಯಕ್ಕನ ಪುರಾಣ', ಮಹಾದೇವಿಯಕ್ಕನ ಸಾಂಗತ್ಯ' ಮೊದಲಾದ ಅನೇಕ ಕೃತಿಗಳು ಬಂದಿವೆ. ಅನೇಕ ಶರಣರ ಚರಿತ್ರೆಗಳ ಒಂದು ಭಾಗವಾಗಿಯೂ ಅಕ್ಕಮಹಾದೇವಿಯ ಕಥೆ ಬಂದಿದೆ.

12ನೆಯ ಶತಮಾನದ ವಚನಕಾರರಿಂದ ಹಿಡಿದು ಇವತ್ತಿನವರೆಗೂ ಅಕ್ಕನನ್ನು ಕುರಿತು ಇಷ್ಟೊಂದು ಸಾಹಿತ್ಯ ಬಂದಿದ್ದರೂ ಆಕೆಯ ಜೀವನದ ಅನೇಕ ಘಟನೆಗಳು ಇನ್ನೂ ಚರ್ಚಾಸ್ಪದವಾಗಿವೆ. ಕೆಲಮಟ್ಟಿಗೆ ತೆರೆದ ಚಳವಳಿಯಾಗಿ ಪ್ರಾರಂಭವಾದ ವೀರಶೈವ ಚಳವಳಿ ಕ್ರಮೇಣ ಒಂದು ಸಾಂಸ್ಥಿಕ ಮತವಾಗಿ ಪರಿಣಮಿಸಿದ್ದರಿಂದ ಮತೀಯನಿಷ್ಠೆ ಅನೇಕ ಸಾರಿ ಚರಿತ್ರೆಯನ್ನು ಒಪ್ಪುವ, ಬಿಡುವ, ಸೇರಿಸುವ, ತಿರುಚುವ ಕೆಲಸವನ್ನೂ ಮಾಡಿರುವುದುಂಟು. ಈ ಲೇಖನದಲ್ಲಿ ಆ ಚರ್ಚೆಯ ವಿವರಗಳಿಗೆ ಹೋಗದೆ ಆಂತರಿಕ ಆಧಾರಗಳನ್ನು ಅವಲಂಬಿಸಿ ಕಾಲದ ಚೌಕಟ್ಟಿನಲ್ಲಿ ಸಂಭವನೀಯವೆಂದು ತೋರುವ ಅವರ ಜೀವನದ ಹೊರಚೌಕಟ್ಟೊಂದನ್ನು ಇಲ್ಲಿ ಕೊಡಲು ಯತ್ನಿಸುತ್ತೇನೆ. ಅದಕ್ಕಿಂತ ಹೆಚ್ಚಾಗಿ ಅವಳ ವಚನಗಳ ಮೂಲಕವೇ ಅವಳನ್ನು ಪರಿಚಯಿಸುವ ಪ್ರಯತ್ನ ಇದು.

ಉಡುತಡಿ ಎಂಬ ಗ್ರಾಮದಲ್ಲಿ ಶಿವಭಕ್ತರ ಮಗಳು ಅಕ್ಕಮಹಾದೇವಿ. ಯುವತಿ ಮಹಾದೇವಿಯ ರೂಪಕ್ಕೆ

ಆ ಪ್ರಾಂತ್ಯದ ಅರಸನಾದ ಕೌಶಿಕ (ಅಥವಾ ಶಾಸನಗಳು ಹೇಳುವಂತೆ ಕಸಪಯ್ಯ ನಾಯಕ) ಮರುಳಾದ. ಕೌಶಿಕ ನೊಂದಿಗೆ ಅಕ್ಕನ ವಿವಾಹ ನಡೆಯಿತೆಂಬುದರ ಬಗ್ಗೆ ವಿವಾದವಿದೆ. ಆದರೂ ಅವಳಿಗೆ ಸಮೀಪದ ಕವಿಗಳ ಹೇಳಿಕೆಯಿಂದಲೂ ವಚನಗಳ ಒಳನೋಟದಿಂದಲೂ ಆಕೆ ವೈವಾಹಿಕ ಜೀವನವನ್ನು ಕಂಡಿದ್ದಿರಬೇಕೆಂದು ತೋರುತ್ತದೆ. ಅಕ್ಕ ವಿವಾಹಿತಳಾಗಿದ್ದಳೆಂದೋ ಕೌಶಿಕ ನೊಂದಿಗೆ ದೈಹಿಕ ಸಂಪರ್ಕ ಹೊಂದಿದ್ದಳೆಂದೋ ತಿಳಿದರೆ ಅವಳ ವ್ಯಕ್ತಿತ್ವ ಒಂದು ಮೆಟ್ಟಿಲು ಕೆಳಗಿಳಿದೀತೇನೋ ಎಂಬ ಆತಂಕ ಕೆಲವರಲ್ಲಿರುವಂತಿದೆ. ಅನುಭಾವಿಕ ತುಡಿತ ಗಳೇ ಮುಖ್ಯವಾಗಿದ್ದ ಅಕ್ಕನಿಗೆ ಲೌಕಿಕ ಕಾಮನೆ ಗಳೊಂದಿಗೆ ಬದುಕುವುದು ಅಸಾಧ್ಯವಾಯಿತು. 'ದೇವ ಎನಗೆ ಭವಿಯ ಸಂಗವೆಂದು ಮಾಣ್ಬುದು ಎನ್ನ ತಂದೆ, ದೇವ ಬೆರಕೆಯಲ್ಲದಚ್ಚ ಬಕುತಿ ಸುಖವದೆಂದು ತಂದೆ' ಎಂದು ಪರಿತಪಿಸುವ ಅಕ್ಕನ ಮನಸ್ಸು ವಚನದೊಳಗಿದೆ. 'ಒಳಗಣ ಗಂಡನವ್ವಾ ಹೊರಗಣ ಮಿಂಡನವ್ವಾ ! ಎರಡನೂ ನಡೆಸಲು ಬಾರದವ್ವಾ' ಎಂಬ ತೀರ್ಮಾನಕ್ಕೆ ಒಳಗೊಳಗೇ ಬಂದಿರಬೇಕು. ಒಳಗಿನ ಪಾರಮಾರ್ಥಿ ಕತೆಗೂ ಸುತ್ತುವರಿದ ಲೌಕಿಕಕ್ಕೂ ನಡೆಯುತ್ತಿದ್ದ ಸಂಘರ್ಷ ಒಮ್ಮೆ ಸ್ಫೋಟಗೊಂಡಿತು. ಕೌಶಿಕನನ್ನು ತ್ಯಜಿಸಿ ಬರುವಾಗ ಆಕೆ ಉಟ್ಟ ಬಟ್ಟೆಯನ್ನೂ ಕಿತ್ತೊಗೆದು ದಿಗಂಬರೆಯಾಗಿ ಬಂದಳೆಂದು ಅವಳನ್ನು ಕುರಿತ ಸಾಹಿತ್ಯ ಹೇಳುತ್ತದೆ. ದಿಗಂಬರತ್ವದ ಪ್ರಸ್ತಾಪ ಆಕೆಯ ವಚನಗಳಲ್ಲಿ ಬಂದಿದೆ :

ನಾಣ ಮರೆಯ ನೂಲು ಸಡಿಲೆ ನಾಚುವರು
ನೋಡಾ ಗಂಡು ಹೆಣ್ಣೆಂಬ ಜಾತಿ
ಪ್ರಾಣದೊಡೆಯ ಜಗದೊಳಗೆ ಮುಳುಗುತ್ತ
ತೆರಹಿಲ್ಲದಿರಲು
ದೇವರಮುಂದೆ ನಾಚಲೆಡೆಯುಂಟೆ ?
ಚನ್ನಮಲ್ಲಿಕಾರ್ಜುನಂಗೆ ಜಗವೆಲ್ಲ ಕಣ್ಣಾಗಿ
ನೋಡುತ್ತಿರಲು
ಮುಚ್ಚಿ ಮರೆಸಬಹುದೆ ಹೇಳಯ್ಯ.

ಮತ್ತೊಂದು ವಚನದಲ್ಲಿ ಆಕೆ ಹೇಳುವಂತೆ :

ಉಟ್ಟ ಉಡಿಗೆ ತೊಡಿಗೆಯನ್ನು ಸೆಳೆಯಬಹುದೇ
ಹೊರತು
'ಮುಚ್ಚಿ ಮುಸುಕಿರ್ದ ನಿರ್ವಾಣವ ಸೆಳೆದು
ಕೊಳಬಹುದೆ ?'
ಚೆನ್ನಮಲ್ಲಿಕಾರ್ಜುನ ದೇವರ ಬೆಳಗನ್ನು ಉಟ್ಟು
ಲಜ್ಜೆಗೆಟ್ಟವಳಿಗೆ
ಉಡಿಗೆ ತೊಡಿಗೆಯ ಹಂಗೇಕೆ'

ಎಂಬಲ್ಲಿ ಅವಳ ಪ್ರಶ್ನೆಯೂ ಇದೆ, ಉತ್ತರವೂ ಇದೆ. ದಿಗಂಬರೆಯಾಗಿ ಹೊರಟ ಅಕ್ಕ ತನ್ನ ಕೂದಲಿನಿಂದಲೇ ತನ್ನ ದೇಹವನ್ನು ಮುಚ್ಚಿಕೊಂಡಳೆಂಬ ಶೂನ್ಯ ಸಂಪಾದನಕಾರರ ವಿವರಣೆಯೇ ಪ್ರಾಯಃ ಕೂದಲಿನಿಂದಾವೃತವಾದ ಅಕ್ಕನ ಚಿತ್ರಗಳಿಗೆ ಪ್ರೇರಣೆ ನೀಡಿರಬೇಕು.

ಶಿವನ ಪ್ರೇಮದಿಂದ ಮತ್ತಳಾದ ಅಕ್ಕನಿಗೆ ಯಾವುದರ, ಯಾರ ಭಯವಾಗಲೀ ಹಂಗಾಗಲೀ ಇಲ್ಲ- ಲೌಕಿಕ ಸ್ತರವನ್ನು ಮೀರಿ ಹೋದವಳಿಗೆ ಲೋಕದ ಬೇಕು– ಬೇಡಗಳಿಂದಾಗುವುದೇನು ? ಲೌಕಿಕ ಒತ್ತಡಗಳಿಗೆ ಕಟ್ಟಿ ಹಾಕುವ ಹಸಿವು, ರಕ್ಷಣೆ, ಸುಖಗಳನ್ನು ಕುರಿತು ಅಕ್ಕ ಹೀಗೆನ್ನುತ್ತಾಳೆ :

ಹಸಿವಿಂಗೆ ಭಿಕ್ಷವುಂಟು
ತೃಷೆಗೆ ಹಳ್ಳದಲ್ಲಿ ಸುಚಿತ್ತವಾದ ಅಗ್ಘವಣಿಯುಂಟು
ಕಟ್ಟಿಕೊಂಬೊಡೆ ತಿಪ್ಪೆಯ ಮೇಲೆ ಅರಿವೆಯುಂಟು
ಶಯನಕ್ಕೆ ಹಾಳುದೇಗುಲವುಂಟು
ನನ್ನ ಸಮಸುಖಿಯಾಗಿ ನಿನ್ನ ಜ್ಞಾನವುಂಟು
ಚೆನ್ನಮಲ್ಲಿಕಾರ್ಜುನ!

ಕೌಶಿಕನನ್ನು ತೊರೆದು ಹೊರಟ ಅಕ್ಕ ಅನೇಕ ರೀತಿಯ ಕಷ್ಟನಷ್ಟಗಳನ್ನು ಅನುಭವಿಸಿರಬೇಕು. ಅವಳನ್ನು ಕುರಿತು ಮೊದಲ ಕೃತಿ ಬರೆದ ಕವಿ ಹರಿಹರನು ಹೇಳುವಂತೆ ಕೌಶಿಕನಿಗೆ ಅವಳ ಮೇಲೆ ಇನ್ನೂ ವ್ಯಾಮೋಹವಿದ್ದುದರಿಂದ ಆಕೆಯ ದಾರಿಯಲ್ಲಿದ್ದ ಕಲ್ಲುಮಠ ಹುಲ್ಲುಮಠದ ರಾಜ ಗುರುಗಳಿಗೆ ಲಂಚಕೊಟ್ಟು ಅವರ ಮೂಲಕ ಆಕೆಯನ್ನು ಒಲಿಸಿಕೊಳ್ಳಲು ಯತ್ನಿಸಿ ವಿಫಲನಾಗುತ್ತಾನೆ. ಬೆನ್ನು ಹತ್ತಿಬಂದ ಸಂಸಾರವನ್ನು ಕುರಿತು ಅಕ್ಕ ತನ್ನ ವಚನದಲ್ಲಿ ಹೇಳಿದ್ದಾಳೆ :

ಕಲ್ಲಹೊಕ್ಕರೆ ಕಲ್ಲ ಬಿರಿಸಿದೆ
ಗಿರಿಯ ಹೊಕ್ಕರೆ ಗಿರಿಯ ಬಿರಿಸಿದೆ
ಬಾಪು ಸಂಸಾರವೇ ಬೆನ್ನಿಂದ ಬೆನ್ನ ಹತ್ತಿಬಂದೆ
ಚನ್ನಮಲ್ಲಿಕಾರ್ಜುನಯ್ಯ, ಇನ್ನೇವೆನಿನ್ನೇವೆ.

ಶಿವನ ಚಿಂತೆಯಲ್ಲೇ ಮುಳುಗಿ ಸಾಗುತ್ತಿದ್ದ ಈ ಅನುಭಾವಿಗೆ ಸುತ್ತಲಿನ ಜಗತ್ತಿನ ಇರವಿನ ಪರಿವೆ ಇರ

ದಿದ್ದರೂ ಆ ಜಗತ್ತಿಗೆ. ಅಕ್ಕನ ಹೊರ ಇರವಿನ ಪರಿವೆ ಮಾತ್ರ ಇರುವುದು ಅಸಹಜವಲ್ಲ, ಅಂತೆಯೇ ಆ ರೂಪವತಿ ಯುವತಿ ಅನೇಕ ಕಾಮುಕರ ನೋಟಕ್ಕೆ ಈಡಾಗಿದ್ದಿರಬಹುದೆಂಬುದನ್ನು, ಇಂಥ ಅನುಭವಗಳಿಗೆ ಪ್ರತಿಕ್ರಿಯೆಯಾಗಿದ್ದಿರಬಹುದಾದ ವಚನಗಳು ಸೂಚಿಸುತ್ತವೆ :

ಎಮ್ಮೆಗೊಂದು ಚಿಂತೆ ! ಸಮ್ಮಗಾರನಿಗೊಂದು ಚಿಂತೆ ! !
ನನಗೆ ನನ್ನ ಚಿಂತೆ ! ತನಗೆ ತನ್ನ ಕಾಮದ ಚಿಂತೆ
ಒಲ್ಲೆ ಹೋಗು, ಸೆರಗ ಬಿಡು ಮರುಳೆ
ನನಗೆ ಚೆನ್ನಮಲ್ಲಿಕಾರ್ಜುನ ದೇವರು
ಒಲಿವನೋ ಒಲಿಯನೋ ಎಂಬ ಚಿಂತೆ.

ಒಬ್ಬ ಕೌಶಿಕನ ಕಾಮುಕಾಪೇಕ್ಷೆಯನ್ನು ತಿರಸ್ಕರಿಸಿ ಹೊರಗೆ ಬಂದ ಅಕ್ಕ ಕೌಶಿಕನನ್ನು ಕುರಿತ ತನ್ನ ತಿರಸ್ಕಾರವನ್ನು ಮತ್ತೆ ಮತ್ತೆ ಹೇಳಬೇಕಾದ, ಕಾಮುಕಾಪೇಕ್ಷೆಯಿಂದ ಬಂದವರನ್ನು ಮತ್ತೆ ಮತ್ತೆ ನೋವಿನಿಂದ, ಕ್ರೋಧದಿಂದ ಎದುರಿಸಬೇಕಾದ ಪ್ರಸಂಗ ಆಕೆಯ ಜೀವನದಲ್ಲಿ ಬಂದಿದ್ದಿರಬೇಕು. ಸ್ತ್ರೀಯ ದೇಹ ಯಾವತ್ತೂ ಕಾಮಕ್ಕೆ, ಕಾಮುಕ್ಕಷ್ಟೇ ತೆರೆದುಕೊಂಡಿರುತ್ತದೆ, ತೆರೆದುಕೊಂಡಿರಬೇಕೆಂಬ ಕಲ್ಪನೆಯಿದ್ದ ಸಮಾಜದಲ್ಲಿ ವಿರಕ್ತಿಯನ್ನು ಒಳಗೆ ತುಂಬಿಕೊಂಡು ಹೊರಟ ಅಕ್ಕನಂಥವರು ನಡೆಸಬೇಕಾದ ಹೋರಾಟ, ಅನುಭವಿಸಬೇಕಾದ ದುಗುಡ ಎಂಥದೆಂಬುದನ್ನು ಅವಳ ಅನೇಕ ವಚನಗಳು ಕಾಣಿಸುತ್ತವೆ. ಚನ್ನಮಲ್ಲಿಕಾರ್ಜುನನ ಹೊರತಾಗಿ ಉಳಿದ ಪುರುಷರು ತನಗೆ ಸಹೋದರರೆಂದು ತಿಳಿಯುವ ಅಕ್ಕ 'ನೋಡುವ ಕಂಗಳಿಗೆ ರೂಹಿಂಬಾಗಿರಲು ನೀವು ಮನನಾಚದೆ ಬಂದಿರಣ್ಣ' ಎಂದು ಕೇಳುತ್ತಾಳೆ. ಈ ಕೆಳಗಿನ ವಚನ ಅವಳು ಅನುಭವಿಸಿದ್ದಿರಬಹುದಾದ ನೋವಿಗೆ ಕಷ್ಟಕೋಟಲೆಗೆ ಸ್ಮಾರಕವಾಗಿ ನಿಂತಿದೆ ;

ಬಟ್ಟಿಹ ಮೊಲೆಯು, ಭರದ ಜವ್ವನದ
ಚೆಲುವ ಕಂಡು ಬಂದಿರಣ್ಣಾ !
ಅಣ್ಣಾ, ನಾನು ಹೆಂಗುಸಲ್ಲ !
ಅಣ್ಣಾ, ನಾನು ಸೂಳೆಯಲ್ಲ !
ಅಣ್ಣಾ, ಮತ್ತೆ ನನ್ನ ಕಂಡು ಕಂಡು
ಆರೆಂದು ಬಂದಿರಣ್ಣ ?
ಚೆನ್ನಮಲ್ಲಿಕಾರ್ಜುನನಲ್ಲದ ಮಿಕ್ಕಿನ ಪುರುಷನು
ನಮಗಾಗದ ಮೋರೆ ನೋಡಣ್ಣ.

ಹರಿಹರನ ಪ್ರಕಾರ ಅಕ್ಕ ಆಗಿನ ವೀರಶೈವ ಚಳವಳಿಯ ಕೇಂದ್ರವಾದ ಕಲ್ಯಾಣಕ್ಕೆ ಬರದೆ ನೇರವಾಗಿ ಶ್ರೀಶೈಲಕ್ಕೆ ಹೋದಳು ಮತ್ತು ಅಲ್ಲಿಯೇ ಶಿವನೊಂದಿಗೆ ಐಕ್ಯವಾದಳು. ಆದರೆ ಆಕೆಯ ಹಾಗೂ ಇತರ ವಚನಕಾರರ ವಚನಗಳು ತಿಳಿಸುವಂತೆ ಆಕೆ ಕಲ್ಯಾಣಕ್ಕೆ ಬಂದು ಆ ಚಳುವಳಿಯಲ್ಲಿದ್ದವರ ಪರಿಚಯ ಪಡೆದಿದ್ದಳು. ಬಸವಣ್ಣ, ಅಲ್ಲಮ, ಚನ್ನಬಸವಣ್ಣ ಮೊದಲಾದ ನೇತಾರರೇ ಆದಿಯಾಗಿ ಎಲ್ಲರೂ ತುಂಬ ಗೌರವ, ವಿಶ್ವಾಸದಿಂದ ಆಕೆಯನ್ನು ನಡೆಸಿಕೊಂಡರೆಂಬುದನ್ನು ವಚನಗಳಲ್ಲಿ ಕಾಣಬಹುದು. ಆ ಬಗೆಗೆ ಅಕ್ಕನ ಹೃದಯ ತುಂಬಿದ ಕೃತಜ್ಞತೆಯೂ ಇದೆ. ಕಲ್ಯಾಣದಲ್ಲಿ ಆಕೆ ತನ್ನ ಸಮಾನ ಮನೋಧರ್ಮದವರೊಡನೆ ಕಳೆದ ದಿನಗಳು ಅವಳ ಆಧ್ಯಾತ್ಮಪರವಾದ ವ್ಯಕ್ತಿತ್ವಕ್ಕೆ ಅಪಾರ ತೃಪ್ತಿಯನ್ನೂ ಸಂತೋಷವನ್ನೂ ತಂದುಕೊಟ್ಟವೆ. ಕಲ್ಯಾಣದ ಬಗೆಗಿನ ತನ್ನ ವಿಶ್ವಾಸ, ಕೃತಜ್ಞತೆಗಳನ್ನು ಅಕ್ಕ ತನ್ನ ಕೆಲವು ವಚನಗಳಲ್ಲಿ ವ್ಯಕ್ತಪಡಿಸಿದ್ದಾಳೆ. ಅಂಥದೊಂದು ಅಭಿವ್ಯಕ್ತಿ ; 'ಒಳಗು ತಿಳಿದು ಚನ್ನಮಲ್ಲಿಕಾರ್ಜುನಂಗೊಲಿದು ಉಭಯಲಜ್ಜೆಯಳಿದೆನಾಗಿ ಕಲ್ಯಾಣವ ಕಂಡು ನಮೋ ನಮೋ ಎನುತಿರ್ದೆನು' ಕಲ್ಯಾಣದ ಈ ಚಳವಳಿ ಅಕ್ಕನನ್ನು ಒಪ್ಪಿ, ಸ್ವೀಕರಿಸಿತಾದರೂ ಪ್ರಾರಂಭದಲ್ಲಿ ಆಕೆ ಅನೇಕ ಬಗೆಯ ಪರೀಕ್ಷೆಗೆ ಒಳಗಾಗಿದ್ದಿರಬೇಕು. ವಚನಗಳ ಆಧಾರದ ಮೇಲೆ 12ನೆಯ ಶತಮಾನದ ಆ ಚಳವಳಿಯ ಸಂದರ್ಭವನ್ನು ಪುನರಚಿಸುವ ಪ್ರಯತ್ನವಾದ 'ಶೂನ್ಯ ಸಂಪಾದನೆ'ಗಳು ಅಂದಿನ ಧಾರ್ಮಿಕ–ಆಧ್ಯಾತ್ಮಿಕ ಗೋಷ್ಠಿಗಳಲ್ಲಿ ಆಕೆಯನ್ನು ಅಲ್ಲಮಾದಿಗಳು ಪರೀಕ್ಷಿಸಿದ ಬಗೆಯನ್ನು ಹೇಳುತ್ತವೆ. ಒಂದೆರಡು ಶತಮಾನಗಳಲ್ಲಿ ಚರಿತ್ರೆಯ ಸಂಗತಿಗಳು ಅತ್ತಿತ್ತ ಸರಿದಿದ್ದರೂ ಅಕ್ಕನ ನಂತರದ ಕಾಲದಲ್ಲಿ ಅವಳ ಚರಿತೆ ಪಡೆದ ರೂಪವನ್ನು ತೋರಿಸುವ ಈ ಪ್ರಸಂಗ ನಿರೂಪಣೆ ಕುತೂಹಲಕಾರಿಯಾಗಿದೆ. ನಿನ್ನ ಸತಿಯ ಗುರುತನ್ನು ಹೇಳು ಎಂಬುದು ಇಲ್ಲಿ ಅಲ್ಲಮನ ಮೊದಲ ಪ್ರಶ್ನೆ. 'ಚನ್ನಮಲ್ಲಿಕಾರ್ಜುನ ಗಂಡನೆನಗೆ. ಮಿಕ್ಕಿದ ಲೋಕದ ಗಂಡರೆನಗೆ ಸಂಬಂಧವಲ್ಲವಯ್ಯ' ಎಂಬ ವಿವರಣೆ ಅಕ್ಕನದು. ನಂತರದ ಪ್ರಶ್ನೆ

ಆಕೆಯ ದಿಗಂಬರತ್ವವನ್ನು ಕುರಿತದ್ದು. ದಿಗಂಬರೆಯಾಗಿದ್ದೂ ಕೇಶದಿಂದ ದೇಹವನ್ನು ಮುಚ್ಚುವ ಪ್ರಯತ್ನವೇಕೆ ಎಂಬುದಕ್ಕೆ ಆಕೆಯ ಉತ್ತರ : 'ಫಲ ಒಳಗೆ ಪಕ್ವವಾಗಿಯಲ್ಲದೆ ಹೊರಗಣ ಸಿಪ್ಪೆ ಒಪ್ಪಗೆಡದು ಕಾಮನ ಮುದ್ರೆಯ ಕಂಡು ನಿಮಗೆ ನೋವಾದೀತೆಂದು ಆ ಭಾವದಿಂದ ಮುಚ್ಚಿದೆ ಇದಕ್ಕೆ ನೋವೇಕೆ ? ಕಾಡದಿರಣ್ಣಾ ಚನ್ನಮಲ್ಲಿಕಾರ್ಜುನ ದೇವರ ದೇವನ ಒಳಗಾದವಳಾ.' 'ಕಾಮನ ಮುದ್ರೆಯ ಕಂಡು ನೋವಾ' ಗುವ ಹಂತದಿಂದ ಅಲ್ಲಮಾದಿಗಳು ಮೇಲಿದ್ದರೆಂದು ಭಾವಿಸಿದರೆ ಅಕ್ಕನ ಈ ಸಮರ್ಥನೆ ಅಲ್ಲಮಾದಿಗಳಿಗೆ ಗೌರವ ತರುವಂಥದಲ್ಲ, ಆದರೆ ಅಕ್ಕನ ನಂತರದ ಕಾಲದಲ್ಲಿ ಅವಳು ದಿಗಂಬರೆಯಾದಳೆಂಬುದನ್ನು ಹೇಗಾದರೂ ಮುಚ್ಚುವ ತವಕ ಇಂಥ ನಿರೂಪಣೆಯ ಹಿಂದೆ ಇದ್ದಿರುವುದು ಸಂಭವ. ಶೂನ್ಯ ಸಂಪಾದನೆಗಳು ಚಿತ್ರಿಸುವ ಈ ಪ್ರಸಂಗದಲ್ಲಿ ವಾಸ್ತವಿಕತೆಯ ಅಂಶಗಳನ್ನು ತೆಗೆಯುವುದು ಕಷ್ಟ. ಆದರೂ ವೈವಾಹಿಕ ಚೌಕಟ್ಟನ್ನು ಮುರಿದು ವಿರಕ್ತೆಯಾಗಿ ಹೊರಬಂದ ಈ ಯುವತಿಯನ್ನು ಸಮಾಜ ಅನೇಕ ಪ್ರಶ್ನೆ, ಪ್ರತಿಕ್ರಿಯೆಗಳಿಂದ ಚುಚ್ಚಲು ಪ್ರಯತ್ನಿಸಿರುವುದು ಸಾಧ್ಯ ಎಂಬುದನ್ನು ಈ ನಿರೂಪಣೆ ಸೂಚಿಸುತ್ತಿದೆ. ಅಂಥ ಸಮಾಜದ ಪ್ರತಿಕ್ರಿಯೆಗಳಿಗೆ ಜಗ್ಗದ ಆಕೆಯ ವಿರಕ್ತ ವ್ಯಕ್ತಿತ್ವವನ್ನು ಶರಣ ಸಮಾಜ ಸ್ವೀಕರಿಸಿತು, ಗೌರವಿಸಿತು. ಹೀಗೆ ಆಕೆಯನ್ನು ಸ್ವೀಕರಿಸುವಾಗ ಶರಣ ಸಮೂಹ ಆಕೆಯ ಅನುಭಾವಿಕ ಎತ್ತರವನ್ನು ಒರೆತೆ ಹಚ್ಚಿಯೇ ಸ್ವೀಕರಿಸಿದೆ ಎಂಬುದನ್ನು ಶೂನ್ಯ ಸಂಪಾದನೆಗಳು ಒತ್ತಿ ಹೇಳುತ್ತಿವೆ.

ಕಲ್ಯಾಣದ ಈ ಚಳವಳಿ ಸಾಂಪ್ರದಾಯಿಕವಾದ ಜಾತೀಯ ಚೌಕಟ್ಟುಗಳನ್ನು ಮುರಿಯ ತೊಡಗಿದಾಗ ನೇರವಾದ ಘರ್ಷಣೆಗಳು ಪ್ರಾರಂಭವಾಗಿ ಚಳವಳಿಯಲ್ಲಿ ಸೇರಿದ್ದ ಜನರು ಕಲ್ಯಾಣದಿಂದ ಚದುರಿಹೋಗಬೇಕಾದ ಸಂದರ್ಭ ಬಂದಿತು. ಪ್ರಾಯಃ ಈ ಸಂದರ್ಭದಲ್ಲಿ ಅಕ್ಕನೂ ಶ್ರೀಶೈಲದ ಕಡೆಗೆ ಸಾಗಿರಬೇಕು, ಶ್ರೀಶೈಲದಲ್ಲಿ ಅನುಭಾವಿಕ ಸಾಧನೆಯಲ್ಲಿ ತೊಡಗಿ ತನ್ನ ಕೊನೆಯ ದಿನಗಳನ್ನು ಕಳೆದಳೆಂಬುದನ್ನು ಹೆಚ್ಚು ಕಡಿಮೆ ಅವಳ ಎಲ್ಲ ಚರಿತ್ರಕಾರರೂ ಒಪ್ಪುತ್ತಾರೆ. ಅಕ್ಕನ ಪ್ರಧಾನ ತುಡಿತಗಳು, ಅವಳ ಭಾವಲಹರಿಗಳು, ಅವಳ ವ್ಯಕ್ತಿತ್ವದ ವಿವಿಧಾಂಶಗಳನ್ನೆಲ್ಲ ಅವಳ ವಚನಗಳಲ್ಲಿ ಗಮನಿಸಬಹುದು.

ಅಕ್ಕ ಕನ್ನಡದ ಶ್ರೇಷ್ಠ ಕವಿಗಳಲ್ಲಿ ಒಬ್ಬಳು. ವಿವಿಧ ಮೂಲಗಳಿಂದ ದೊರೆಯುವ ಆಕೆಯ ವಚನಗಳು ಸುಮಾರು 350. ಈ ವಚನಗಳಲ್ಲದೆ ಕೆಲವು ಹಾಡುಗಳು, 'ಸೃಷ್ಟಿಯ ವಚನ', 'ಯೋಗಾಂಗ ತ್ರಿವಿಧಿ' ಎಂಬ ಕೃತಿಗಳೂ ಅಕ್ಕನ ಹೆಸರಿನಲ್ಲಿವೆ. ಚನ್ನಮಲ್ಲಿಕಾರ್ಜುನ ಎಂಬುದು ಅಕ್ಕನ ವಚನಗಳ ಅಂಕಿತ. ವೀರಶೈವ ಸಿದ್ಧಾಂತ 'ಶರಣ ಸತಿ ಲಿಂಗಪತಿ' ನಿಲವನ್ನು ಒಪ್ಪಿತ್ತು. ಇದರ ಪ್ರಕಾರ ಭಕ್ತನು ಸತಿಯ ಸ್ಥಾನದಲ್ಲಿ ನಿಂತು ಶಿವನನ್ನು ತನ್ನ ಪತಿ, ಒಡೆಯನಾಗಿ ಕಾಣುತ್ತಾನೆ. ಈ ಸಂಬಂಧ ವಿನ್ಯಾಸದ ಹಿನ್ನೆಲೆಯಲ್ಲಿ ಬರುವ ಅಕ್ಕನ ವಚನಗಳು ಆಧ್ಯಾತ್ಮ ಪ್ರಣಯಿನಿಯ ಅನೇಕ ಭಾವವಲಯಗಳನ್ನು ಅನುಭಾವಿಕತೆಯ ಹಂತಗಳನ್ನು ಅದರೆಲ್ಲ ತೀವ್ರತೆ, ನವಿರಿನೊಂದಿಗೆ ಚಿತ್ರಿಸುತ್ತವೆ. ಲೌಕಿಕದ ಬಗೆಗಿನ ಅಕ್ಕನ ತೀವ್ರ ವಿರಕ್ತಿ, ಶಿವನನ್ನು ಕುರಿತ ಪ್ರೀತಿಯ ಪರಮಾವಧಿ, ಅಗಲಿಕೆಯ ಕಡುನೋವು, ಸಮ್ಮಿಲನದ ಹರ್ಷೋದ್ವೇಗಗಳೆಲ್ಲವೂ ಭಾಷೆಯಲ್ಲಿ ಮೈ ತಳೆಯುವ ರೀತಿ ವಿಸ್ಮಯಕಾರಿಯಾದ್ದು, ಪಾರಮಾರ್ಥಿಕ ತುಡಿತದ ತೀವ್ರತೆ, ಸಮಾಜ, ಸಂಪ್ರದಾಯಗಳನ್ನು ಕುರಿತ ವಿಮರ್ಶಕ ನೋಟ, ತನ್ನ ಜೀವನ ದೃಷ್ಟಿ ಮತ್ತು ಅನುಭಾವಿಕ ಒಲವಿಗನುಸಾರವಾಗಿ ಸಾಗುವಾಗ ತಾಳುವ ಧೈರ್ಯ ತನ್ಮಯತೆ – ಇವೆಲ್ಲವುಗಳನ್ನೂ ಅಕ್ಕನ ವಚನಗಳು ಕಾಣಿಸುತ್ತವೆ. ಅವಳ ಭಾವನೆಯ ತೀವ್ರತೆ, ಅಂತಃಪ್ರಾಮಾಣ್ಯತೆ ಮತ್ತು ವೈಯಕ್ತಿಕತೆಗಳು ಅಕ್ಕನ ಸಾಹಿತ್ಯವನ್ನು ನಮಗೆ ಹೆಚ್ಚು ಪ್ರಿಯವಾಗಿಸುತ್ತವೆ.

ತನ್ನ ಒಳಗಿನ ಪ್ರೇರಣೆಗೆ ಮಾತ್ರ ಕಿವಿಗೊಟ್ಟು ಸಮಾಜವನ್ನು ಎದುರಿಸಿದ ಅಕ್ಕ ಎದುರಿಸಬೇಕಾಗಿ ಬಂದ ಸಮಾಜವಿಮರ್ಶೆ, ನಿಂದೆ, ಅಣಕಗಳು ಎಂಥವಿರಬೇಕೆಂಬುದು ನಮ್ಮ ಊಹೆಗೆ ನಿಲುಕದಿರುವಂಥದಲ್ಲ. ಆದರೆ ಈ ಎಲ್ಲ ನಿಂದೆ, ಟೀಕೆಗಳಿಗೆ ಒಮ್ಮೊಮ್ಮೆ ಆಕೆ ನೊಂದಿರುವಳಾದರೂ ಅವಳೊಳಗಿನ ಸಮಾಧಾನ ತತ್ತರಿಸುವುದಿಲ್ಲ:

ಹೆದರದಿರು ಮನವೇ. ಬೆದರದಿರು ಮನವೇ
ನಿಜವನರಿತು ನಿಶ್ಚಿಂತನಾಗಿರು
ಫಲವಾದ ಮರನ ಇಡುವುದೊಂದು ಕೋಟಿ
ಎಲವದ ಮರನ ಇಡುವರೊಬ್ಬರ ಕಾಣೆ
ಭಕ್ತಿಯುಳ್ಳವರ ಬೈವರೊಂದು ಕೋಟಿ
ಭಕ್ತಿಯಿಲ್ಲದವರ ಬೈವರೊಬ್ಬರ ಕಾಣೆ

# ಸ್ತ್ರೀ ಪ್ರತ್ಯೇಕತೆಯೆಂಬ ಧೌಷ್ಟ್ಯ

□ ಡಾ|| ಅನುಪಮಾ ನಿರಂಜನ

ಕಳೆದ ಸಂಚಿಕೆಯಿಂದ

ಆ ದಾರಿಯಲ್ಲಿ ಸಾಗುವಾಗ ಸ್ತ್ರೀ ಪ್ರತ್ಯೇಕತೆ ನಿವಾರಿಸಲು ಹಲವು ಅಂಶಗಳ ಬಗ್ಗೆ ನಾವು ಗಂಭೀರವಾಗಿ ಯೋಚಿಸಬೇಕಾಗಿದೆ. ಈ ದಿಸೆಯಲ್ಲಿ ಮಹಿಳಾ ಶಿಕ್ಷಣ ಮೊದಲ ಸ್ಥಾನ ಪಡೆಯುತ್ತದೆ.

ಶಿಕ್ಷಣವು ಒಬ್ಬ ವ್ಯಕ್ತಿಯ ವ್ಯಕ್ತಿತ್ವವನ್ನು ಮತ್ತು ವೈಚಾರಿಕತೆಯನ್ನು ರೂಪಿಸುವ ಸಾಧನ. ಇದರಿಂದಾಗಿ ಸಮಾಜದಲ್ಲಿ ಆ ವ್ಯಕ್ತಿಯ ಸ್ಥಾನಮಾನ ಏರುತ್ತದೆ. ಆದ್ದರಿಂದಲೇ ಮಹಿಳೆಯ ಸ್ಥಿತಿಗತಿ ಸುಧಾರಣೆಗೆ, ಶಿಕ್ಷಣ ಪ್ರಬಲ ಅಸ್ತ್ರ ಎಂದು ಯೋಜನಾ ತಜ್ಞರು ಅಭಿಪ್ರಾಯ ಪಡುತ್ತಾರೆ. ವಿದ್ಯಾಭ್ಯಾಸ ಮಹಿಳೆಯ ಅರಿವಿನ ದಿಗಂತವನ್ನು ವಿಸ್ತರಿಸುವುದರ ಮೂಲಕ ಅವಳಿಗೆ ವಿಶೇಷ ಆತ್ಮವಿಶ್ವಾಸವನ್ನು ಧೈರ್ಯವನ್ನು ತಂದುಕೊಡುತ್ತದೆ. ಆದ್ದರಿಂದಲೇ ವಿದ್ಯಾವಂತ ಮಹಿಳೆಯರಲ್ಲಿ ಕೀಳರಿಮೆ ಮಾಯವಾಗಿ ಅವರ ಸ್ಥಾನದಲ್ಲಿ ಆತ್ಮಗೌರವ, ಸ್ವತಃ ನಿರ್ಧಾರ ತೆಗೆದುಕೊಳ್ಳುವ ಶಕ್ತಿ ಮತ್ತು ವೈಚಾರಿಕ ಪ್ರಜ್ಞೆ ಮೂಡುತ್ತವೆ. ಕುರುಡು ನಂಬಿಕೆಗಳನ್ನು ಅಳಿಸಿ ಹಾಕಿ ಅವಳನ್ನು ಹೊಸ ಆಲೋಚನೆಗಳತ್ತ ಒಯ್ಯುವುದು ಶಿಕ್ಷಣದ ಪ್ರಮುಖ ಧ್ಯೇಯ.

‘ಶಿಕ್ಷಣ ತೆರೆಯುವ ಇನ್ನೊಂದು ಅವಕಾಶ ಉದ್ಯೋಗವು. ಮಹಿಳೆಯ ಎರಡನೆಯ ದರ್ಜೆಯ ಸ್ಥಿತಿಗೆ’ ಅವಳು ಗಂಡಿನ ಮೇಲೆ ಆರ್ಥಿಕವಾಗಿ ಅವಲಂಬಿಸಿರುವುದೇ ಕಾರಣ. ಅವಳಿಗೆ ಬದುಕಿನಲ್ಲಿ ಸ್ವಾತಂತ್ರ್ಯ, ಸಮಾನತೆ ಸಿಗಬೇಕಾದರೆ ಅವಳು ಉದ್ಯೋಗ ಹಿಡಿದು ಆರ್ಥಿಕವಾಗಿ ಸ್ವಾವಲಂಬಿಯಾಗುವುದು ಬಲು ಮುಖ್ಯ. ಸ್ಥಿತ್ಯಂತರಗೊಳ್ಳುತ್ತಿರುವ ನಮ್ಮ ಸಮಾಜದಲ್ಲಿ ಈಗಾಗಲೇ ಈ ಬದಲಾವಣೆ ಕಂಡುಬರುತ್ತಿದೆ. ಆದರೆ ಉದ್ಯೋಗಸ್ಥ ಮಹಿಳೆಗೆ ಅನೇಕ ಹೊಸ ಸಮಸ್ಯೆಗಳು ಎದುರಾಗಿವೆ. ಹೊರಗೆ ಮತ್ತು ಮನೆಯೊಳಗೆ ಎರಡೂ ಕಡೆ ದುಡಿಯುತ್ತಾ ಅವಳು ಮಾನಸಿಕವಾಗಿ ಹಾಗೂ ದೈಹಿಕವಾಗಿ ಕುಸಿದಿದ್ದಾಳೆ. ಮನೆಗೆಲಸ ಮತ್ತು ಮಕ್ಕಳ ಪಾಲನೆ ಪೋಷಣೆಗಳಲ್ಲಿ ಗಂಡನೂ ಸಹಕರಿಸುವಂತಾದರೆ ಅವಳ ಭಾರ ಎಷ್ಟೋ ಕಡಿಮೆಯಾಗುತ್ತದೆ, ಮನೆಗೆಲಸದಲ್ಲಿ ನೆರವಾಗುವುದು ಗಂಡಸಿನ ಮರ್ಯಾದೆಗೆ ಕುಂದಲ್ಲ ಎಂಬ ಹೊಸ ಧೋರಣೆ ನಮ್ಮ ಸಮಾಜದಲ್ಲಿ ಮೂಡುವಂತಾಗಬೇಕು. ಇಷ್ಟಲ್ಲದೆ ದುಡಿಯುವ ಮಹಿಳೆಗೆ ಅನುಕೂಲವಾಗುವಂತೆ ಕೆಲಸದ ಜಾಗಗಳಲ್ಲಿ ಸುಲಭ ಬೆಲೆಯ ಕ್ಯಾಂಟೀನುಗಳು, ಮಕ್ಕಳನ್ನು ನೋಡಿಕೊಳ್ಳಲು ಕ್ರೆಷೆಗಳು, ಹಾಸ್ಟೆಲುಗಳು ಮುಂತಾದುವನ್ನು ಸರ್ಕಾರ ನಿರ್ಮಿಸಬೇಕಾಗಿದೆ. ಸಮಾಜವಾದೀ ರಾಷ್ಟ್ರಗಳಲ್ಲಿ ಇಂಥ ಅನುಕೂಲ ವಿಪುಲವಾಗಿರುವುದರಿಂದ, ಅಲ್ಲಿನ ಸ್ತ್ರೀಯರು ಯಾವ ಆತಂಕವೂ ಇಲ್ಲದೆ, ತನು ಮನ ತಾವು ರಾಷ್ಟ್ರದ ಅಭಿವೃದ್ಧಿ ಕಾರ್ಯದಲ್ಲಿ ತೊಡಗಿಸಿಕೊಂಡಿದ್ದಾರೆ.

ಸಾಕ್ಷರರಾದ ಮಹಿಳೆಯರಿಗೆ ಕಾನೂನಿನಲ್ಲಿ ತಮಗಿರುವ ಹಕ್ಕುಬಾಧ್ಯತೆಗಳೇನು ? ಎಂಬುದನ್ನು ಅರಿಯುವುದು ಸುಲಭ. ಲೇಖನಗಳು, ಭಾಷಣಗಳು ಮತ್ತು ವಿಚಾರ ಸಂಕಿರಣಗಳು ಅವರಿಗೆ ಅನೇಕ ಮಾಹಿತಿಗಳನ್ನು ನೀಡುತ್ತವೆ. ಆದರೆ ಅನಕ್ಷರಸ್ಥರಾದ ಹಳ್ಳಿಗಾಡಿನ ಮಹಿಳೆಯರನ್ನು ಮುಟ್ಟಲು ದೃಶ್ಯ ಶ್ರಾವ್ಯ ಮಾಧ್ಯಮಗಳಾದ ರೇಡಿಯೋ ದೂರದರ್ಶನಗಳು ಮುಖ್ಯ ಪಾತ್ರ ವಹಿಸುತ್ತವೆ. ಮಹಿಳೆಗೆ ಒತ್ತಾಸೆಯಾಗಿ ನಿಂತಿರುವ ಅನೇಕ ಕಾನೂನುಗಳಲ್ಲಿ ಬಾಲ್ಯವಿವಾಹ, ಬಹುಪತ್ನಿ, ಸತಿ ಮತ್ತು ಭ್ರೂಣ ಹತ್ಯೆ ನಿಷೇಧ–ಆಸ್ತಿಹಕ್ಕು, ವಿವಾಹ ವಿಚ್ಛೇದನ, ಜೀವನಾಂಶದ ಹಕ್ಕು ದತ್ತಕ ಹಕ್ಕು, ಮುಂತಾದ ಕಾನೂನುಗಳು ಮುಖ್ಯವಾದವು. ಇವುಗಳ ತಿಳುವಳಿಕೆ ಇದ್ದ ಮಹಿಳೆಯರು ತಮ್ಮ ಹಕ್ಕು ಬಾಧ್ಯತೆಗಳಿಗಾಗಿ ಹೋರಾಡಲು ಶಕ್ತರಾಗುತ್ತಾರೆ. ಉದಾಹರಣೆಗೆ ವರದಕ್ಷಿಣಾ ನಿಷೇಧ ಕಾನೂನನ್ನು ಜಾರಿಗೆ ತರಲು ಮಹಿಳೆಯರೇ ವಿಶೇಷವಾಗಿ ಶ್ರಮಿಸಬೇಕಾಗಿದೆ. ವರದಕ್ಷಿಣೆಯನ್ನು ನಾವು ತೆಗೆದುಕೊಳ್ಳುವುದಿಲ್ಲ ಮತ್ತು ಕೊಡುವುದಿಲ್ಲ ಎಂಬ ಕಟ್ಟು ನಿಟ್ಟಿನ ನಿಯಮ ರೂಪಿಸಿಕೊಳ್ಳುವುದರ

ಜೊತೆಗೆ, ತಮ್ಮ ಮಕ್ಕಳು ಸರಳವಾಗಿ ವಿವಾಹವಾಗುವಂತೆ ವ್ಯವಸ್ಥೆ ಮಾಡಬೇಕು. ಅಂತರ್ಜಾತೀಯ ವಿವಾಹಗಳೂ ವರದಕ್ಷಿಣೆ ನಿರ್ಮೂಲನಮಾಡುವಲ್ಲಿ ಸಹಕಾರಿ.

1917ರಲ್ಲಿ ಚೀನಾದಲ್ಲಿ ಕ್ರಾಂತಿಯಾಗಿ ಜನರಾಜ್ಯ ಸ್ಥಾಪಿತವಾದಾಗ ಅವರು ಮೊದಲು ಘೋಷಿಸಿದ್ದು ಸ್ತ್ರೀ ಪುರುಷರ ಸಮಾನತೆಯನ್ನು. ಅದುವರೆಗೆ ರೂಢಿಯಲ್ಲಿದ್ದ ಊಳಿಗಮಾನ್ಯ ವಿವಾಹ ಪದ್ಧತಿಯನ್ನು ರದ್ದುಗೊಳಿಸಿ, ಹೊಸ ವಿವಾಹ ಪದ್ಧತಿ ಜಾರಿಗೆ ತಂದರು. ಇದರಲ್ಲಿ ಸ್ವತಃ ವಧೂ–ವರರು ಸರಳವಾಗಿ ರಿಜಿಸ್ಟರ್ಡ್ ವಿವಾಹ ವಾಗುವುದು ಕಡ್ಡಾಯವಾಯಿತು. ಹೀಗೆ ಚೀನಾದಲ್ಲಿ ವಿವಾಹ ಪದ್ಧತಿ ಬದಲಾವಣೆಯಿಂದ ಸ್ತ್ರೀಗೆ ಆಗುತ್ತಿದ್ದ ಶೋಷಣೆಗಳು ತಪ್ಪಿ ಅವಳ ಸ್ಥಾನಮಾನ ಏರಿದವು. ಈ ಬಗ್ಗೆ ನಾವೂ ಗಂಭೀರವಾಗಿ ಯೋಚಿಸಬೇಕಾಗಿದೆ.

ಸ್ತ್ರೀಯ ಸ್ಥಾನಮಾನ ನಿರ್ಧರಿಸುವಲ್ಲಿ ಸಮೂಹ ಮಾಧ್ಯಮಗಳ ಪಾತ್ರ ಹಿರಿದು! ಬಂಡವಾಳ ಶಾಹಿ ವ್ಯವಸ್ಥೆಯ ಮುಖವಾಣಿಗಳಾದ ಪತ್ರಿಕೆ, ಚಲನಚಿತ್ರ, ಜಾಹಿರಾತು, ರೇಡಿಯೋ, ದೂರದರ್ಶನ ಮುಂತಾದುವು ಗಳು ಪಿತೃಪ್ರಧಾನ ವ್ಯವಸ್ಥೆಯನ್ನು ಸಹಜವಾಗಿಯೇ ಬೆಂಬಲಿಸುತ್ತವೆ. ಆದ್ದರಿಂದಲೇ ಸಮೂಹ ಮಾಧ್ಯಮ ಗಳಲ್ಲಿ ಹೆಣ್ಣಿನ ನಕಾರಾತ್ಮಕ ಬಿಂಬ ಮೂಡುವುದೇ ಜಾಸ್ತಿ. ಹೆಣ್ಣೆಂದರೆ ಅಬಲೆಯೂ, ಕೋಮಲೆಯೂ, ಲಜ್ಜಾನ್ವಿತಳೂ, ಮೂರ್ಖಳೂ, ಆತ್ಮವಿಶ್ವಾಸವಿಲ್ಲದವಳೂ ಆಗಿದ್ದಾಳೆ ಎಂಬು ದನ್ನು ಇವು ವೈಭವೀಕರಿಸುತ್ತವೆ. ಜಾಹಿರಾತು ಮತ್ತು ಚಲನಚಿತ್ರಗಳು ಹೆಣ್ಣನ್ನು ಭೋಗವಸ್ತುವನ್ನಾಗಿ ಮತ್ತು ಅಲಂಕಾರವಸ್ತುವನ್ನಾಗಿ ಪ್ರದರ್ಶಿಸುತ್ತವೆ.

ಚಲನಚಿತ್ರ ಮತ್ತು ದೂರದರ್ಶನ ಜಾಹಿರಾತುಗಳಲ್ಲಿ ಮಹಿಳೆ ಯಾವಾಗಲೂ ಸ್ನಾನಮಾಡುತ್ತಲೋ, ಬಟ್ಟೆ ಒಗೆಯುತ್ತಲೋ, ಅಡುಗೆ ಮಾಡುತ್ತಲೋ, ಇರುವುದನ್ನು ತೋರಿಸುತ್ತಾರೆ. ನಮ್ಮಲ್ಲಿ ಅನೇಕ ಮಹಿಳೆಯರು ಈಗ ವಿಜ್ಞಾನಿಗಳು, ಡಾಕ್ಟರು, ಎಂಜಿನಿಯರ್ ಮತ್ತು ಕಂಪ್ಯೂಟರ್ ತಜ್ಞೆಯರಾಗಿದ್ದಾರೆ. ಈ ಹೊಸ ಪಾತ್ರ ಗಳಲ್ಲಿ ಅವರನ್ನು ಎಲ್ಲ ಮಾಧ್ಯಮಗಳಲ್ಲೂ ತೋರಿಸುವುದರ ಮೂಲಕ, ಹೆಣ್ಣಿನ ಬಗೆಗೆ ಹೊಸ ಸಕಾರಾತ್ಮಕ ಬಿಂಬ ಮೂಡಲು ಸಾಧ್ಯ. ಪ್ರಜ್ಞಾವಂತರು ಮತ್ತು ಸ್ತ್ರೀ ಪರವಾದಿಗಳು ಈ ಮಾಧ್ಯಮಗಳಲ್ಲಿ ಸೇರಿಕೊಂಡಾಗ ಮಾತ್ರ ಇಂಥ ಬದಲಾವಣೆ ನಿರೀಕ್ಷಿಸಬಹುದು.

ಅಂತರರಾಷ್ಟ್ರೀಯ ಮಹಿಳಾ ವರ್ಷದ ಬಳಿಕ ಭಾರತೀಯ ಮಹಿಳೆಯರ ಸ್ಥಿತಿಗತಿ ಕುರಿತಾದ ಅನೇಕ ಸಮೀಕ್ಷೆಗಳು ನಡೆದುವು. ಮಹಿಳೆಯರ ಸಮಸ್ಯೆಗಳು ಶೈಕ್ಷಣಿಕ ತಜ್ಞರು, ಸಮಾಜ ವಿಜ್ಞಾನಿಗಳು ಮತ್ತು ರಾಜನೀತಿ ನಿರೂಪಕರ ಕಣ್ಣಿಗೆ ಬೀಳಲು ಇವು ಸಹಕಾರಿ ಯಾದುವು. ಅವರೆಲ್ಲ ಕೂಡಿದ ತಜ್ಞರ ಸಮಿತಿ, ಮಹಿಳೆಯರ ಅಸಮಾನತೆ ನೀಗಲು ಅನೇಕ ಕಾರ್ಯಕ್ರಮ ಗಳನ್ನು ರೂಪಿಸಿದೆ. ಇದರ ಫಲವಾಗಿಯೇ 7ನೇ ಪಂಚ ವಾರ್ಷಿಕ ಯೋಜನೆಯಲ್ಲಿ ಮಹಿಳೆಯರ ಅಭಿವೃದ್ಧಿಗೆ ವಿಶೇಷ ಪ್ರಾಮುಖ್ಯತೆ ಕೊಟ್ಟಿದ್ದು ಅದರ ಪ್ರಕಾರ ಸಾಕ್ಷರತೆ, ತಾಯಿ ಮಕ್ಕಳ ಆರೋಗ್ಯರಕ್ಷಣೆ, ಮಹಿಳೆ ಯರಿಗೆ ತಾಂತ್ರಿಕ ತರಬೇತಿ ಮತ್ತುಉದ್ಯೋಗಾವಕಾಶ ಗಳನ್ನು ಹೆಚ್ಚಿಸಲಾಗಿದೆ. ದುಡಿಯುವ ತಾಯಂದಿರಿಗೆ ಅನುಕೂಲವಾಗುವ ಹಾಗೆ ಕ್ರೀಷೆಗಳು, ಹಾಸ್ಟೆಲುಗಳು. ಸಮಾನವೇತನ, ಹೆರಿಗೆ ರಜಾ ಸೌಲಭ್ಯ, ಸಮಾಜದಲ್ಲಿ ಮತ್ತು ಕುಟುಂಬದಲ್ಲಿ ಸಮಾನತೆ, ಇವು ಸಿಗಲು ಒತ್ತಾಯಮಾಡುವಿಕೆ ಸೇರ್ಪಡೆಯಾಗಿವೆ.

ಕಳೆದ ಹದಿನೈದು ವರ್ಷಗಳಲ್ಲಿ ದೇಶಾದ್ಯಂತ ಅನೇಕ ಮಹಿಳಾ ಸಂಘಟನೆಗಳು ಹುಟ್ಟಿಕೊಂಡಿವೆ. ಇವು ಯಾವ ರಾಜಕೀಯ ಪಕ್ಷಕ್ಕೂ ಸೇರದ್ದೊಂದು ವಿಶೇಷ. ಆರಂಭ ದಲ್ಲಿ ಇವು ಮಹಿಳಾ ಶೋಷಣೆಯ ನೆಲೆಗಳನ್ನು ಗುರ್ತಿಸಿ ದುವು. ಈಗ ಅಸಮಾನತೆ ನೀಗಲು ಸಮರ್ಥರೀತಿಯಲ್ಲಿ ಹೋರಾಡುತ್ತಿವೆ ಕರಪತ್ರ, ಲೇಖನ, ಭಾಷಣ, ಬೀದಿ ನಾಟಕ, ಹಾಡು, ಪ್ರದರ್ಶನಗಳ ಮುಖಾಂತರ, ಹಳ್ಳಿ ಗಾಡಿನ ಮಹಿಳೆಯರಲ್ಲೂ ಜಾಗೃತಿ ಉಂಟುಮಾಡು ತ್ತಿರುವುದು ಈ ಸಂಘಟನೆಗಳ ವೈಶಿಷ್ಟ್ಯ.

ಹೀಗೆ ಬಲು ನಿಧಾನಗತಿಯಲ್ಲಿ ಭಾರತೀಯ ಮಹಿಳೆಯ ಬದುಕು ಸ್ಥಿತ್ಯಂತರಗೊಳ್ಳುತ್ತಿದೆ. ಅವಳೀಗ ಹೆಚ್ಚು ವಿದ್ಯಾ ವಂತೆಯಾಗಿದ್ದಾಳೆ, ಪ್ರಜ್ಞಾವಂತಳಾಗಿದ್ದಾಳೆ. ಕೆಲವರಿ ಗಾದರೂ ಉದ್ಯೋಗದಿಂದಾಗಿ ಆರ್ಥಿಕ ಸ್ವಾತಂತ್ರ್ಯ ಲಭಿ ಸಿದೆ. ಆದರೂ ಅವಳ ಬದುಕನ್ನು ಹಿಂದಕ್ಕೆ ಎಳೆಯುವ ವ್ಯವಸ್ಥೆಯ ಕೈವಾಡದ ವಿಪರ್ಯಾಸಗಳು ಈಗಲೂ ಕಾಣು ತ್ತಿವೆ. ಬದುಕನ್ನು ವಿಷಮಗೊಳಿಸುವ ವ್ಯವಸ್ಥೆಯ ವಿರುದ್ಧ ಹೋರಾಡುತ್ತಾ, ತನ್ನ ತನವನ್ನು ಪ್ರತಿಷ್ಠಾಪಿಸುತ್ತಾ, ಮುನ್ನಡೆವ ಮಹಿಳೆ, ಹೊಸ ಸಮಾಜದ ಹರಿಕಾರಳಾಗು ತ್ತಾಳೆ. ಆಗ ಮಾತ್ರ ಸ್ತ್ರೀ ಪುರುಷರೊಂದಾಗಿ ರಾಷ್ಟ್ರದ ಏಕತೆಗೆ ದುಡಿಯುವುದು ಸಾಧ್ಯ.

(15.9.88ರಂದು ಬೆಂಗಳೂರು ಆಕಾಶವಾಣಿಯಲ್ಲಿ ಪ್ರಸಾರಿತ)



## ಎ ಡಿಕೇಡ್ ಆಫ್ ವಿಮೆನ್ಸ್ ಮೂವ್‌ಮೆಂಟ್ ಇನ್ ಇಂಡಿಯಾ

ಮೈಸೂರಿನ ಒಡಲಿನಲ್ಲಿ ಪ್ರಪ್ರಥಮ ಬಾರಿಗೆ ಮಹಿಳೆಯರ ಸ್ಥಿತಿಗತಿಗಳನ್ನು ಅಧ್ಯಯನ ಮಾಡಲು 'ಮಹಿಳಾ ಅಧ್ಯಯನ ಸಂಸ್ಥೆ' ಅರಳುತ್ತಿರುವಾಗಲೇ ಭಾರತದ ಪ್ರಪ್ರಥಮ ಮಹಿಳಾ ಅಧ್ಯಯನ ಸಂಸ್ಥೆ ಹೊರತಂದಿರುವ ಈ ಪುಸ್ತಕದತ್ತ ಕಣ್ಣೋಟ ಹರಿಸುವುದು ಒಂದು ರೀತಿಯಲ್ಲಿ ಸಾಹಸದ ಕೆಲಸವೇ.

ಮಹಿಳಾ ಚಳವಳಿಯ ಭಾರಿ ಅಲೆಯನ್ನು ಕಂಡಿರದ ಕರ್ನಾಟಕದ ಅನುಭವದ ಹಿನ್ನೆಲೆಯಲ್ಲಿ ಮುಂಬೈನ ಅಥವಾ ಆ ಮೂಲಕ ಭಾರತದ ಮಹಿಳಾ ಚಳವಳಿಯನ್ನು ಅರ್ಥೈಸುವಾಗ ನಾವು ಕಂಡುಂಡ ಅನುಭವಗಳೇ ತಲೆ ಹಾಕುವುದು ಸಹಜ.

ಚಳವಳಿಯ ಸ್ವರೂಪ ಹಾಗೂ ಸಾಗಬೇಕಾದ ದಾರಿಯನ್ನು ತಡಕಾಡಲು ಸಂಸ್ಥೆ ವಿಚಾರ ಸಂಕಿರಣವನ್ನು ಏರ್ಪಡಿಸಿತು. ಅಲ್ಲಿ ಮಂಡಿತವಾದ ಪ್ರಬಂಧಗಳು ಹಾಗೂ ಚರ್ಚೆಗಳ ಮೂಸೆಯಲ್ಲಿ ಮೂಡಿಬಂದದ್ದು ಈ ಪುಸ್ತಕ.

ಈ ಪುಸ್ತಕದಲ್ಲಿ ಮುಖ್ಯವಾಗಿ ಮೂರು ಅಂಶಗಳತ್ತ ನೋಟ ಹರಿಸಲಾಗಿದೆ. ಒಂದು 'ಪ್ರಮುಖ ವಾಹಿನಿ ಸಂಘಟನೆಗಳು' 'ಮೂಲದಲ್ಲಿ ಮಹಿಳಾ ಸಂಘಟನೆ' ಹಾಗೂ 'ಸ್ವಾಯುತ್ತ ಮಹಿಳಾ ಸಂಘಟನೆಗಳು'

ಪುಸ್ತಕದ ಮೊದಲ ಭಾಗ 'ಪ್ರಮುಖ ವಾಹಿನಿ ಸಂಘಟನೆಗಳು' ಸ್ವಾತಂತ್ರ್ಯ ಪೂರ್ವದಲ್ಲಿ ಇದ್ದ ಮಹಿಳಾ

---

"ಎ ಡಿಕೇಡ್ ಆಫ್ ವಿಮೆನ್ಸ್ ಮೂವ್‌ಮೆಂಟ್ ಇನ್ ಇಂಡಿಯಾ"

ಸಂಪಾದಕಿ : ಡಾ. ನೀಲಾ ದೇಸಾಯಿ

ಪ್ರಕಾಶಕರು : ಹಿಮಾಲಯ ಪಬ್ಲಿಷಿಂಗ್ ಹೌಸ್ ಬೆಲೆ : ರೂ. 125/–

---

ಮುಂಬೈ ವಿಶ್ವವಿದ್ಯಾಲಯದ 'ಮಹಿಳಾ ಅಧ್ಯಯನ ಸಂಸ್ಥೆ' ಇಡೀ ದೇಶದಲ್ಲಿಯೇ ಮೊಟ್ಟ ಮೊದಲನೆಯ ಸಂಸ್ಥೆ. ಈ ಜೊತೆಗೇ ಭಾರತದ ಎಲ್ಲಾ ಮಹಿಳಾ ಸಂಘಟನೆಗಳನ್ನು ಒಂದೆಡೆ ಕಲೆಹಾಕಿ ಆ ಮೂಲಕ ಚಿಂತನೆ ಹಾಗೂ ಚಟುವಟಿಕೆಗಳ ಮಧ್ಯೆ ಬೆಸುಗೆ ಹಾಕುವ ಆಸೆ ಈ ಸಂಸ್ಥೆಯದು. 1974ನೆಯ ವರ್ಷವನ್ನು ಅಂತರಾಷ್ಟ್ರೀಯ ಮಹಿಳಾ ವರ್ಷವನ್ನಾಗಿ ಆಚರಿಸಲು ವಿಶ್ವಸಂಸ್ಥೆ ಕರೆ ಕೊಟ್ಟಿದ್ದು ಅಧ್ಯಯನ ಸಂಸ್ಥೆಯ ಆಸೆಗೆ ಕುಮ್ಮಕ್ಕು ನೀಡಿತು.

ಈ ಹಿನ್ನೆಲೆಯಲ್ಲಿಯೇ ಒಂದು ದಶಕದಲ್ಲಿನ ಮಹಿಳಾ ಸಂಘಟನೆಗಳು ಆದಕ್ಕಿದ್ದ ಸ್ಫೂರ್ತಿ ಆ ಸಂಘಟನೆಯ ಕಾರ್ಯ ವಿಧಾನಗಳನ್ನು ಕುರಿತು ಚರ್ಚಿಸುತ್ತದೆ. ಎರಡನೆಯ ಭಾಗ 'ಮೂಲದಲ್ಲಿ ಮಹಿಳಾ ಸಂಘಟನೆ' ಕೇವಲ ಮಧ್ಯಮ ವರ್ಗಕ್ಕೆ ಮಾತ್ರವೇ ಸೀಮಿತವಾಗದೆ ಗ್ರಾಮದತ್ತ ಸಾಗಿ ಬಡವರು, ಕಾರ್ಮಿಕರು, ರೈತರನ್ನು ಸಂಘಟಿಸುವ ದೃಷ್ಟಿ ಹರಿಸಿದೆ. ಮೂರನೆಯ ಭಾಗ 'ಸ್ವಾಯುತ್ತ ಮಹಿಳಾ ಸಂಘಟನೆಗಳು' ಈ ಭಾಗದಲ್ಲಿ ಕೆಲವು ರಾಜ್ಯಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸ್ವಾಯತ್ತ ಮಹಿಳಾ ಸಂಘಟನೆಗಳ ಕಾರ್ಯವೈಖರಿಯನ್ನು ಮುಂದಿಡಲಾಗಿದೆ.

ಇಡೀ ಪುಸ್ತಕದಲ್ಲಿ ಹಲವಾರು ಬಾರಿ ಚರ್ಚೆಯಾಗುವುದು ಹಾಗೂ ಪುಸ್ತಕವನ್ನು ಸಂಪಾದಿಸಿರುವ ಡಾ. ನೀಲಾ ದೇಸಾಯಿಯವರು ಪ್ರಸ್ತಾವನೆಯಲ್ಲಿಯೇ ಮುಂದಿಡುವ ವಿಚಾರವೆಂದರೆ 'ಮಹಿಳಾ ಸಂಘಟನೆ ರಾಜಕೀಯಾತೀತವಾಗಿರಬೇಕೇ ?' ಎಂಬುದು. ರಾಜಕೀಯಾತೀತ ಎಂಬುದರ ಬಗ್ಗೆಯೇ ಪ್ರಬಂಧಗಳನ್ನು ಮಂಡಿಸಿದವರ ಬಗ್ಗೆಯೇ ಭಿನ್ನಾಭಿಪ್ರಾಯಗಳಿವೆ.

ಸಂಪಾದಕಿ ನೀಲಾ ದೇಸಾಯಿ 1975ರಲ್ಲಿ ಪುಣೆಯಲ್ಲಿ ಸ್ತ್ರೀಮುಕ್ತಿ ಸಂಘರ್ಷ ಏರ್ಪಡಿಸಿದ್ದ ಮೊಟ್ಟಮೊದಲ ಸಮ್ಮೇಳನ ಎಡ ರಾಜಕೀಯ ಪಕ್ಷದ ಒಡನಾಟದಿಂದಾಗಿ ಮೂಡಿಬಂದಿದ್ದು ಆ ಸಮ್ಮೇಳನದಲ್ಲಿ ಬಡವರು ಹಾಗೂ ದುಡಿಯುವ ವರ್ಗದ ಹೆಂಗಸರೇ ಹೆಚ್ಚಾಗಿದ್ದರು ಎನ್ನುತ್ತಾರೆ. ಆದರೆ ತದನಂತರದ ಯಾವುದೇ ಪ್ರಬಂಧದಲ್ಲಿ ದುಡಿವವರನ್ನು ಬಡವರನ್ನು ಮುಖ್ಯವಾಗಿಟ್ಟುಕೊಂಡು ಸಂಘಟನೆರೂಪಿಸಿದ ಮಹಿಳಾ ಸಂಘಟನೆಗಳ ಪ್ರಸ್ತಾಪವೇ ಬರುವುದಿಲ್ಲ. ಕೆಲವೆಡೆ ಸಂಘಟಿಸಬೇಕಾದ ಅಗತ್ಯದ ಬಗ್ಗೆ ಪ್ರಸ್ತಾಪ ಬರುತ್ತದೆಯೇ ಹೊರತು ಅದನ್ನು ಮೀರಿ ಕಾರ್ಯಚಟುವಟಿಕೆ ನಡೆದ ವಿವರಗಳು ಕಾಣಲಿಲ್ಲ. ಮೂರನೆಯ ಭಾಗದಲ್ಲಿ ಮುಖ್ಯ ಚರ್ಚೆಯು ಕೇಂದ್ರವೇ ಮೂಲದಲ್ಲಿ ಅಂದರೆ ಗ್ರಾಮದಲ್ಲಿ ಮಹಿಳೆಯರನ್ನು ಸಂಘಟಿಸುವುದು. ಆದರೆ ಇಲ್ಲಿಯೂ ಸಹ ಈ ಸಂಘಟನೆ ಚಳವಳಿಯಾಗಿ ಮೂಡಿಬಂದ ನಿದರ್ಶನಗಳು ಇಲ್ಲ.

ಈ ಹಿನ್ನೆಲೆಯಲ್ಲಿಯೇ ರಾಜಕೀಯಾತೀತ ಮಹಿಳಾ ಸಂಘಟನೆಯ ಪ್ರಸ್ತಾಪ ಮುಖ್ಯವೆನಿಸುತ್ತದೆ. ಈ ಪುಸ್ತಕದ ಕೊನೆಯಲ್ಲಿ ಪ್ರಬಂಧಗಳ ಬಗೆಗೆ ನಡೆದ ಚರ್ಚೆಯ ಒಟ್ಟಭಿಪ್ರಾಯವನ್ನೂ ಸೇರಿಸಲಾಗಿದೆ. ಗುಜರಾತ್‌ನಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿ ಅತ್ಯಂತ ಪ್ರಬಲ ಮಹಿಳಾ ಸಂಘಟನೆಯಾಗಿದ್ದ AIWC ನಂತರ ಕ್ರಮೇಣ ಕುಸಿದದ್ದು ತನ್ನ ಪ್ರಭಾವವನ್ನು ಸಂಪೂರ್ಣವಾಗಿ ಕಳೆದುಕೊಂಡಿರುವುದರ ಬಗ್ಗೆ ವ್ಯಾಪಕ ಚರ್ಚೆ ನಡೆದಿದೆ. ಇದರಲ್ಲಿ ಚರ್ಚೆಯಲ್ಲಿ ಭಾಗವಹಿಸಿದವರು AIWC ಸಂಘಟನೆ ಮುಖ್ಯವಾಗಿ ರಾಜಕೀಯಾತೀತ ಸಂಘಟನೆ. ಮಹಿಳೆಯರ ಸಮಸ್ಯೆಗಳು ರಾಜಕೀಯಾತೀತವಾದವುಗಳು ಎಂದೇ ನಂಬಲಾಗಿತ್ತು. ಬಹುಶಃ ಈ ಕಾರಣಕ್ಕಾಗಿಯೇ ಮಹಿಳಾ ಚಳವಳಿ ಮುಂದುವರಿಯಲಿಲ್ಲ. ಮಹಿಳೆಯರ ಪ್ರಶ್ನೆಗಳು ರಾಜಕೀಯಾತೀತ ಎಂದು ಪರಿಗಣಿಸಬಾರದು ಎಂಬ ಅಭಿಪ್ರಾಯಕ್ಕೆ ಬರಲಾಗಿದೆ. ಆ ನಂತರದಲ್ಲಿ AIWC ಸಂಘಟನೆಯಲ್ಲಿ ಎಂದೂ ಕೆಳವರ್ಗದ ಮಹಿಳೆಗೆ ಪ್ರಾತಿನಿಧ್ಯವೇ ಇರಲಿಲ್ಲ. ಇದೂ ಸಹ ಸಂಘಟನೆಯ ಹಿನ್ನಡೆಗೆ ಕಾರಣ ಎನ್ನಲಾಗಿದೆ.

ಯಾವುದೇ ಮಹಿಳಾ ಸಂಘಟನೆ ಆರಂಭದಲ್ಲಿ ಸ್ವಾಯತ್ತವಾಗುಳಿದಿದ್ದರೂ ಸಹ ಸಮಸ್ಯೆಗಳ ಕ್ರೋಢೀಕರಣವಾಗಿ ಅವರ ವಿರುದ್ಧ ಹೋರಾಟ, ಜನಾಭಿಪ್ರಾಯ ರೂಢಿಸಬೇಕಾಗಿ ಬಂದಾಗ ಅದು ರಾಜಕೀಯ ಆಯಾಮವನ್ನು ಪಡೆದುಕೊಳ್ಳಲೇ ಬೇಕಾಗುತ್ತದೆ, ಎಂಬುದು ಪ್ರಮುಖ ಅಂಶ.

ಈ ಪುಸ್ತಕದ ಮುಖ್ಯ ದೋಷವೆಂದರೆ ಎಲ್ಲಿಯೂ ಈ ಮೂರು ಭಾಗಗಳ ನಡುವೆ ಒಂದು ಕೊಂಡಿಯೇ ಏರ್ಪಟ್ಟಿಲ್ಲದಿರುವುದು ಹಾಗೂ ಹಲವಾರು ಪ್ರಬಂಧಗಳು ಕೇವಲ ತಮ್ಮ ರಾಜ್ಯಗಳಲ್ಲಿ ಅನುಭವಗಳ ನಿರೂಪಣೆಯಾಗಿದೆಯೇ ಹೊರತು ತಮ್ಮ ಜನರನ್ನು ಸಂಘಟಿಸುವಾಗ ಆದ ಅನುಭವಗಳಿಗೆ ಕಾರಣ, ಸಂಘಟನೆಯ ಮುನ್ನಡೆ ಹಿನ್ನಡೆಗಳಿಗೆ ಕಾರಣ ಹುಡುಕುವ ಕೆಲಸ ನಡೆದಿಲ್ಲ. ಈ ಎಲ್ಲಾ ಕಾರಣಗಳನ್ನು ಒಟ್ಟುಗೂಡಿಸಿ ದೇಶದ ಮಹಿಳಾ ಸಂಘಟನೆಯ ಮಾನಸಿಕ ಸ್ಥಿತಿಯನ್ನು ಅರ್ಥೈಸಿದ್ದರೆ ಈ ಪುಸ್ತಕ ಖಂಡಿತವಾಗಿಯೂ ಮಹಿಳಾ ಚಳವಳಿಗೆ ಸಲ್ಲಿಸಿದ ಅತ್ಯುತ್ತಮ ಕಾಣಿಕೆಯಾಗುತ್ತಿತ್ತು.

ಈ ದೃಷ್ಟಿಕೋನದ ಅಭಾವದಿಂದಾಗಿಯೇ ಈ ಪುಸ್ತಕ ಓದಿ ಮುಗಿಸುವವರೆಗೂ ಗೋದಾವರಿ ಪರುಳೇಕರ್ ಬುಡಕಟ್ಟು ಜನಾಂಗಗಳ ಮಧ್ಯೆ ಓಡಾಡಿ ಅವರನ್ನು ರಾಜಕೀಯ ಉದ್ದೇಶದಡಿ ಸಂಘಟಿಸುವ ರೀತಿಯನ್ನು ಮಂಡಿಸಿದ 'ಮಾನವ ಎಚ್ಚೆತ್ತಾಗ' ಮತ್ತೆ ಮತ್ತೆ ನೆನಪಿಗೆ ಬಂತು.

**ಮಹಿಳಾ ಪ್ರಶ್ನೆಯ ವಿಶ್ಲೇಷಣೆಗೆ**

**ಮಹಿಳಾ ಚಳವಳಿಗೆ ಆಸರೆಯಾಗಿ**

**ಮಹಿಳಾ ಸಮಸ್ಯೆಗಳ ಚರ್ಚೆಗೆ ವೇದಿಕೆಯಾಗಿ**

**'ಅಚಲ'**

**ದ್ವೈಮಾಸಿಕ**


BOOK-POST/PERIODICALS
Reg. No. MAG (5) PRB. DECL 039/86-87


To,


If undelivered please return to :
Jagruthi Mahila Adhyayana Kendra
221, IV Main Road, Vyalikaval
Bangalore-560 003